CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ನವೆಂಬರ್ ೧೧, ೨೦೦೪ (ಕಾರ್ತಿಕ ೨೦, ಶಕ ವರ್ಷ ೧೯೨೬) | ಸಂಚಿಕೆ ೪೫ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/176/2001-2002, ದಿನಾಂಕ: 30ನೇ ಸೆಪ್ಟೆಂಬರ್ 2004**

**ಉಪಸ್ಥಿತರು:** ಶ್ರೀ ಕೆ.ಸಿ. ಹರಿದಾಸ್, ಕೆ.ಇ.ಎಸ್.,
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದುದಾರರು:** ಎ.ಎ. ಶೇಖ್, ಅಬಕಾರಿ ಉಪ ನಿರೀಕ್ಷಕರು, ಡಿಂಗಿ ಕಛೇರಿ, ಹೊನ್ನಾವರ್.
(ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ)

**ವಿರುದ್ಧ**

**ಅರ್ಜಿದಾರರು:** ಕ್ಷೇತ್ರ ತಂದೆ ಜಟ್ಟಿ ಗೌಡಾ, ಸಾ: ಹಕ್ಕಲಕೇರಿ, ಪೊ: ಗುಣವಂತೆ, ತಾ: ಹೊನ್ನಾವರ.
(ಶ್ರೀ ಎನ್.ಎಸ್. ಭಟ್, ವಕೀಲರು, ಕಾರವಾರ ಇವರು ಪ್ರತಿನಿಧಿಸಿರುತ್ತಾರೆ)

**ತೀರ್ಪು**

1. ಈ ಆರೋಪಣಾ ಪಟ್ಟಿಯನ್ನು ಅಬಕಾರಿ ಉಪ ನಿರೀಕ್ಷಕರು, ಹೊನ್ನಾವರ ಡಿಂಗಿ ಇವರು ಆರೋಪಿಯ ವಿರುದ್ಧ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 34 ರಡಿಯಲ್ಲಿ ಸಲ್ಲಿಸಿ, ಜಪ್ತಿಯಾದಂತಹ ಸ್ವತ್ತುಗಳನ್ನು ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

2. ಅಬಕಾರಿ ಉಪ ನಿರೀಕ್ಷಕರು, ಡಿಂಗಿ ಕಛೇರಿ ಹೊನ್ನಾವರ ಇವರು ದಿನಾಂಕ: 22.02.2002 ರಂದು ಸಾಯಂಕಾಲ 7.00 ಗಂಟೆಯ ಸಮಯಕ್ಕೆ ಖಚಿತವಾದ ವರ್ತಮಾನದ ಮೇರೆಗೆ ಉಪ ವಲಯದ ಉಪ ನಿರೀಕ್ಷಕರು ಮತ್ತು ಉಪ ವಿಭಾಗ ಹಾಗೂ ವಲಯ ಸಿಬ್ಬಂದಿಗಳೊಂದಿಗೆ ಪಂಚರನ್ನು ಒಳಗೊಂಡು ಹೊನ್ನಾವರ ತಾಲ್ಲೂಕಿನ ಮಾಳ್ಕೋಡ ಗ್ರಾಮದ ಕಚ್ಚಾ ರಸ್ತೆಯಲ್ಲಿ ಶರಾವತಿ ನದಿಯ ದಡದ ಹತ್ತಿರ ಕಾಯುತ್ತಿರುವಾಗ ಆರೋಪಿಯು ಯಮಹಾ ಕಂಪನಿಗೆ ಸೇರಿದ ತನ್ನ ದ್ವಿಚಕ್ರ ವಾಹನ ಸಂಖ್ಯೆ: ಕೆಎ-30/ಇ-1375 ನೇದರ ಮೇಲೆ ಒಂದು ಪ್ಲಾಸ್ಟಿಕ್ ಕೈಚೀಲದಲ್ಲಿ ಮೋಟಾರ್ ಟ್ಯೂಬಿನಲ್ಲಿ 20 ಲೀಟರ್ ಆಗುವಷ್ಟು ಕಳ್ಳಭಟ್ಟಿ ಸರಾಯಿಯನ್ನು ಅನಧಿಕೃತವಾಗಿ ಸಾಗಿಸುತ್ತಿದ್ದುದನ್ನು ಪತ್ತೆ ಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 14ರ ಪ್ರಕಾರ ಅಪರಾಧವಾಗಿದ್ದು ಕಲಂ 34ರ ಪ್ರಕಾರ ಶಿಕ್ಷಾರ್ಹವಾಗಿರುವುದಾಗಿ ತಿಳಿಸುತ್ತಾ, ತನ್ನ ಕಛೇರಿಯ ಪ್ರ.ಮಾ. ವರದಿ ಸಂಖ್ಯೆ: 2/2001-02, ದಿನಾಂಕ: 22.02.2002 ರಂತೆ ಗುನ್ಹೆಯನ್ನು ದಾಖಲಿಸಿ, ಗುನ್ಹೆಗೆ ಸಂಬಂಧಿಸಿದ ಪ್ರ.ಮಾ. ವರದಿ ಮತ್ತು ಸ್ವತ್ತಿನ ಪಟ್ಟಿಯ ದೃಢೀಕೃತ ನಕಲನ್ನು ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

3. ದಿನಾಂಕ: 20.03.2002 ರಂದು ಶ್ರೀ ಎನ್.ಎಸ್. ಭಟ್, ವಕೀಲರು, ಕಾರವಾರ ಇವರು ಈ ಪ್ರಾಧಿಕಾರದಲ್ಲಿ ತನ್ನ ಅರ್ಜಿಯನ್ನು ಸಲ್ಲಿಸಿ, ಪ್ರಕರಣದಲ್ಲಿ ಜಪ್ತಿಯಾದ ವಾಹನವು ಕ್ಷೇತ್ರ ಜುಟ್ಟು ಗೌಡಾ ಸಾ: ಹಕ್ಕಲಕೇರಿ, ಗುಣವಂತೆ ಇವರಿಗೆ ಸಂಬಂಧಿಸಿದ್ದು ಇರುವುದಾಗಿ ಅರ್ಜಿಯನ್ನು ಸಲ್ಲಿಸುತ್ತಾ, ಈ ವಾಹನವು ಅರ್ಜಿದಾರರ ದೈನಂದಿನ ವ್ಯವಹಾರಕ್ಕೆ ಅವಶ್ಯಕವಿರುತ್ತದೆಂದೂ, ಅರ್ಜಿದಾರನು ಯಾವುದೇ ಕಾನೂನು ಬಾಹಿರ ಕೃತ್ಯಕ್ಕೆ ವಾಹನವನ್ನು ಬಳಸಿರುವುದಿಲ್ಲವೆಂದೂ ಮತ್ತು ವಾಹನದಲ್ಲಿ ಯಾವುದೇ ಸರಾಯಿ ವಗೈರೆ ಸಾಗಾಟ ಮಾಡಿದ್ದು ಇರುವುದಿಲ್ಲವೆಂದೂ, ತಿಳಿಸಿರುತ್ತಾರೆ.

4. ಫಿರ್ಯಾದುದಾರರು ಸಲ್ಲಿಸಿದ ದಾಖಲೆಗಳನ್ನಾಧರಿಸಿ ಪ್ರಕರಣದ ಆರೋಪಿಯಾದ ಕ್ಷೇತ್ರ ತಂದೆ ಜಟ್ಟಿ ಗೌಡಾ, ಸಾ: ಹಕ್ಕಲಕೇರಿ ಗುಣವಂತೆ, ಹೊನ್ನಾವರ ಇವರಿಗೆ ಸಂಖ್ಯೆ: ಅಬಕಾರಿ/ಡಿಟಿಸಿಆರ್/176/2001-02, ದಿನಾಂಕ: 22.05.2002 ರಂತೆ ಈ ಪ್ರಕರಣದಲ್ಲಿ ಜಪ್ತಿಯಾದಂತಹ ಸ್ವತ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ಕಾರಣ ಕೇಳಿ ನೋಟೀಸನ್ನು ಕ.ಅ. ಕಾಯ್ದೆ ಕಲಂ 43ಬಿ(1)ಎ ಪ್ರಕಾರ ನೀಡಲಾಗಿ ಅದನ್ನು ಅವರಿಗೆ ದಿನಾಂಕ: 1.06.2002 ರಂದು ತನಿಖಾಧಿಕಾರಿಗಳು ಜಾರಿ ಮಾಡಿರುತ್ತಾರೆ. ಸದರಿ ಕಾರಣಕೇಳಿ ನೋಟೀಸಿಗೆ ಆರೋಪಿ/ಅರ್ಜಿದಾರರು ದಿನಾಂಕ: 09.10.2002 ರಂದು ತನ್ನ ಸಮಜಾಯಿಷಿಯನ್ನು ಸಲ್ಲಿಸಿರುತ್ತಾರೆ.

5. ಈ ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ಸಿಆರ್ಎಂ/ಡಿಟಿಸಿಆರ್/176/2001-2002, ದಿನಾಂಕ: 22/05/2002 ರಂತೆ ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ಅರ್ಜಿದಾರರು ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಲಾಗಿ ಸದ್ರಿ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲಾದಂತೆ ಮಾನ್ಯ ಸೆಷನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 49/2002 ದಿನಾಂಕ: 03.01.2003 ರಲ್ಲಿ ಆದೇಶಿಸಿದಂತೆ ಕೆಲವು ಷರತ್ತುಗಳನ್ನು ವಿಧಿಸಿ ರೂ.15,000/- ಗಳ ಬ್ಯಾಂಕ್ ಗ್ಯಾರಂಟಿ ಪಡೆದು ಅರ್ಜಿದಾರರಿಗೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲಾಗಿರುತ್ತದೆ.

6. ಪ್ರಕರಣದ ತನಿಖಾಧಿಕಾರಿಗಳು ದಿನಾಂಕ: 7.5.2002 ರಂದು ಈ ಪ್ರಾಧಿಕಾರಕ್ಕೆ ರಾಸಾಯನಿಕ ವಿಶ್ಲೇಷಣಾ ವರದಿಯ ನಕಲನ್ನು ಮುಂದಿನ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ. ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರಕಾರ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿಯ ಮದ್ಯಸಾರದ ಅಂಶವು $43.5^0$ ಯು.ಪಿ. ಯಷ್ಟು ಇದ್ದು ಇದು ಮಾನವ ಸೇವನೆಗೆ ಯೋಗ್ಯವಿರುವುದಿಲ್ಲವಾಗಿ ತಜ್ಞರು ಅಭಿಪ್ರಾಯ ಪಟ್ಟಿರುತ್ತಾರೆ.

7. ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ಸಿಆರ್ಎಂ/ಡಿಟಿಸಿಆರ್/176/2001-2002 ದಿನಾಂಕ: 27/01/2004 ರಂತೆ ಈ ಪ್ರಕರಣದಲ್ಲಿ ಜಪ್ತಿಯಾದ ಕಳ್ಳಭಟ್ಟಿ ಸಾರಾಯಿಯನ್ನು ಪ್ಲಾಸ್ಟಿಕ್ ಚೀಲ ಹಾಗೂ ಟ್ಯೂಬಿನ ಸಮೇತ ನಾಶಪಡಿಸಲು ಆದೇಶಿಸಲಾಗಿರುತ್ತದೆ.

8. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ(1)ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿಆರ್‌ಪಿಸಿ ಕಲಂ 207 ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕಲಂ 34 ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯೂ 1 ರಿಂದ 2 ರವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ 1 ರಿಂದ 4ರ ವರೆಗಿನ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿದಾರರಾದ ಗೋವಿಂದ ಬುಧವಂತ ನಾಯ್ಕ ಇವರಿಗೆ ಸಾಕಷ್ಟು ನೋಟೀಸುಗಳನ್ನು ಕಳುಹಿಸಲಾದರೂ ಸಹ ಹಾಜರಾಗದಿದ್ದುದರಿಂದ ಸದ್ರಿಯವರ ಸಾಕ್ಷಿಯನ್ನು ಕೈಬಿಡಲಾಗಿದೆ.

9. ಆದಾಗ್ಯೂ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡುಬಂದಿದ್ದರಿಂದ ದಂಡ ಪ್ರಕ್ರಿಯಾ ಸಂಹಿತೆ ಕಲಂ 313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಡಿ.ಡಬ್ಲ್ಯೂ-1 ರಂತೆ ನುಡಿಸಿರುತ್ತಾರೆ.

10. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರ ಹಾಗೂ ಅರ್ಜಿದಾರರ ಪರವಾಗಿ ಶ್ರೀ ಎನ್.ಎಸ್. ಭಟ್, ವಕೀಲರು ಕಾರವಾರರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬಂತು.

**ವಿವಾದಾಂಶಗಳು:**

11. 1. ಹೊನ್ನಾವರ ತಾಲ್ಲೂಕಿನ ಮಾಳ್ಕೋಡ ಗ್ರಾಮದ ಕಚ್ಚಾ ರಸ್ತೆಯಲ್ಲಿ ಶರಾವತಿ ನದಿಯ ದಡದ ಹತ್ತಿರ ಆರೋಪಿಯು ದಿನಾಂಕ: 22.02.2002 ರಂದು ಸಾಯಂಕಾಲ 7.00 ಗಂಟೆಯ ಸಮಯದಲ್ಲಿ ಯಮಹಾ ಮೋಟಾರ್ ಸೈಕಲ್ ಸಂಖ್ಯೆ: ಕೆಎ-30/ಇ-1375 ನೇದರ ಮೇಲೆ 20 ಲೀಟರ್ ಆಗುವಷ್ಟು ಕಳ್ಳಭಟ್ಟಿ ಸರಾಯಿಯನ್ನು ಒಂದು ಮೋಟಾರ್ ಟ್ಯೂಬಿನಲ್ಲಿ ಅನಧಿಕೃತವಾಗಿ ಸಾಗಿಸಿ, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34 ರಡಿ ಶಿಕ್ಷಾರ್ಹ ಅಪರಾಧ ಮಾಡಿದ್ದಾನೆಂದು ಅಭಿಯೋಜನೆಯವರು ರುಜುವಾತುಪಡಿಸುತ್ತಾರೆಯೇ, ಹೇಗೆ?

2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೊ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?

3. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

**ಉತ್ತರಗಳು:**

12. ಅಂಶ 1:- ಸಕಾರಾತ್ಮಕವಾಗಿ
ಅಂಶ 2:- ನಕಾರಾತ್ಮಕವಾಗಿ
ಅಂಶ 3:- ಸಕಾರಾತ್ಮಕವಾಗಿ

**ಕಾರಣಗಳು**

12. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಮುಖ್ಯ ಸಾಕ್ಷಿದಾರರಾದ ಪ್ರಕರಣದ ಫಿರ್ಯಾದಿ ಅಬ್ದುಲ್ ಸತ್ತಾರ್ ಅಬ್ದುಲ್ ರಹಮಾನ್ ಶೇಖ್, ಅ.ಉ.ನಿ. ರವರು ಈ ಪ್ರಾಧಿಕಾರದಲ್ಲಿ ದಿನಾಂಕ: 26.09.2002 ರಂದು ಹಾಜರಾಗಿ ತನ್ನ ಸಾಕ್ಷಿಯಲ್ಲಿ ಮಾನ್ಯ ಎ.ಡಿ.ಪಿ. ಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, ಈ ಘಟನೆ ಸಂಭವಿಸಿದಾಗ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ಆ ಸಮಯದಲ್ಲಿ ಫಿರ್ಯಾದುದಾರರು ಮೂಲ ದಾಖಲೆಗಳನ್ನು ಸಲ್ಲಿಸದಿರುವ ಬಗ್ಗೆ ಎದುರುದಾರರ ಪರ ವಕೀಲರು ತನ್ನ ತಕರಾರನ್ನು ವ್ಯಕ್ತಪಡಿಸಿದ್ದು, ಸಂಬಂಧಪಟ್ಟ ಮೂಲ ದಾಖಲೆಗಳು ಸಂಬಂಧಪಟ್ಟ ಕ್ರಿಮಿನಲ್ ನ್ಯಾಯಾಲಯದಲ್ಲಿ ಸಲ್ಲಿಸಿರುವುದರಿಂದ ಅದರ ದೃಢೀಕೃತ ನಕಲುಗಳು ಪ್ರಾಧಿಕಾರದಲ್ಲಿ ಲಭ್ಯವಿದ್ದುದರಿಂದ ಎದುರುದಾರರ ತಕರಾರನ್ನು ಪರಿಗಣನೆಗೆ ತೆಗೆದುಕೊಂಡಿಲ್ಲ. ಆದಾಗ್ಯೂ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ ಹೊನ್ನಾವರ ರವರಿಗೆ ದಿನಾಂಕ: 25.09.2002 ರಂದು ಮೂಲ ದಾಖಲೆಗಳನ್ನು ಕಳುಹಿಸುವಂತೆ ಪತ್ರ ಬರೆಯಲಾಗಿ ಇಂದಿನವರೆಗೂ ಅವುಗಳು ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿಲ್ಲ. ನಂತರ ಅರ್ಜಿದಾರರ ಪರ ವಕೀಲರು ಮಾಡಿದ ಪಾಟಿ ಸವಾಲಿನಲ್ಲಿ ತನ್ನ ಕಛೇರಿಯಿಂದ ನ್ಯಾಯಾಲಯವು ಸುಮಾರು ಮುಕ್ಕಾಲು ಕಿ.ಮೀ. ಆಗಬಹುದೆಂದು ಪಂಚರನ್ನು ಎಲ್ಲಿಂದ ಕರೆದುಕೊಂಡು ಬಂದೆವೆಂದು ತಾನು ಹೇಳಬಲ್ಲೆನೆಂದೂ ಕಛೇರಿಯನ್ನು ಬಿಡುವಾಗ ಎಲ್ಲಿಗೆ ಹೋಗುತ್ತೇವೆ ಎಂಬ ಬಗ್ಗೆ ಡೈರಿಯಲ್ಲಿ ನಮೂದಿಸಿರುತ್ತೇವೆಂದೂ ಈ ಪ್ರಕರಣದಲ್ಲಿ ಡೈರಿಯ ಪ್ರತಿಯನ್ನು ಲಗತ್ತಿಸಿ ತಾನು ಸಲ್ಲಿಸಿಲ್ಲವೆಂದೂ, ಡಿಂಗಿ ಕಛೇರಿಯೆಂದರೆ ಡಿಂಗಿಯಲ್ಲಿ ವ್ಯವಹರಿಸಲಿಕ್ಕೆ ಮಾತ್ರ ಅಧಿಕಾರ ಎನ್ನುವುದು ಸರಿ ಎಂದೂ ಡಿಂಗಿ ಕಛೇರಿಯ ವ್ಯಾಪ್ತಿಯು ನೀರಿನಲ್ಲಿ ಮತ್ತು ನೀರಿನ ಅಕ್ಕಪಕ್ಕದಲ್ಲಿ ಸಹ ಇರುತ್ತದೆಂದೂ, ಹೊನ್ನಾವರದಿಂದ ಮಾಳ್ಕೋಡ ಸುಮಾರು 35 ಕಿ.ಮೀ. ನಷ್ಟು ದೂರವಾಗುತ್ತದೆ ಎನ್ನುವುದು ಸರಿಯೆಂದು ವಾಹನದಿಂದ ಮಾಳ್ಕೋಡಕ್ಕೆ ಹೋಗಲು ಸುಮಾರು ಒಂದೂವರೆ ಗಂಟೆ ಹಿಡಿಯುತ್ತೆಂದೂ, ಬಾತ್ಮಿ ಬಂದ ನಂತರ ವಾಹನವನ್ನು ಜಪ್ತಿ ಮಾಡುವ ಬಗ್ಗೆ ಮ್ಯಾಜಿಸ್ಟ್ರೇಟ್‌ರಿಂದಾಗಲಿ ಅಥವಾ ಇಲಾಖೆಯ ಹಿರಿಯ ಅಧಿಕಾರಿಗಳಿಂದಾಗಲಿ ಯಾವುದೇ ಜಪ್ತಿ ವಾರೆಂಟ್ ಪಡೆದುಕೊಂಡಿರುವುದಿಲ್ಲವೆಂದೂ, ಬಾತ್ಮಿ ಬಂದ ನಂತರ ನಮಗೆ ಸರ್ಚ್ ವಾರೆಂಟ್ ಪಡೆಯಲು ಅಪರಾಧಿ ಪರಾರಿಯಾಗಬಹುದೆಂಬ ಕಾರಣದಿಂದ

ಸಾಧ್ಯವಾಗಲಿಲ್ಲವೆಂದೂ, ಈ ರೀತಿ ಡೈರಿಯಲ್ಲಿ ನಮೂದು ಮಾಡಿರುವುದಿಲ್ಲವೆಂದೂ, ಆ ದಿವಸ ನಾವು ಹೋಗದೇ ಇದ್ದುದರಿಂದ ಈ ರೀತಿ ದಾಖಲು ಮಾಡಿಲ್ಲ ಎನ್ನುವುದು ಸರಿಯಲ್ಲವೆಂದೂ, ನಾವು ನಿಂತಂತಹ ಜಾಗದಲ್ಲಿ ಹೆಚ್ಚಿನ ಮನೆಗಳು ಇರಲಿಲ್ಲವೆಂದೂ, ಆ ರಸ್ತೆಯ ಮುಂದೆ ನದಿ ಬರುತ್ತದೆಂದೂ, ಆ ರಸ್ತೆಯ ಮುಂದೆ ನದಿ ಬರುವುದಿಲ್ಲ ಅದು ಮಾಳ್ಕೋಡ ಊರಿನ ಕಡೆಗೆ ಹೋಗುತ್ತದೆ ಎನ್ನುವುದು ಸರಿಯಲ್ಲವೆಂದೂ, ಮತ್ತು ಅಲ್ಲಿ ಬಹಳಷ್ಟು ಮನೆಗಳಿವೆ ಮತ್ತು ಅಲ್ಲಿ ಬಹಳ ಜನ ಓಡಾಡುತ್ತಿರುತ್ತಾರೆ ಅನ್ನುವುದು ಸರಿಯಲ್ಲವೆಂದೂ, ಫೆಬ್ರವರಿ ತಿಂಗಳಿನಲ್ಲಿ ಸಂಜೆ 6.30 ಗಂಟೆಗೆ ಸ್ವಲ್ಪ ಬೆಳಕು ಇರುತ್ತದೆ. ಆ ದಿವಸ ಸುಮಾರು 6.45ಕ್ಕೆ ಕತ್ತಲೆಯಾಗಿತ್ತೆಂದೂ, ಪಂಚನಾಮೆಯಲ್ಲಿ ಕತ್ತಲೆ ಎಷ್ಟು ಗಂಟೆಗೆ ಆಯಿತು ಎನ್ನುವ ಬಗ್ಗೆ ಬರೆಯಲಿಲ್ಲ ಎನ್ನುವುದು ಸರಿಯೆಂದೂ, ಪಂಚನಾಮೆಯನ್ನು ಬ್ಯಾಟರಿ ಬೆಳಕಿನಲ್ಲಿ ಬರೆಯಲಾಯಿತೆಂದೂ, ನಾವು ಆ ದಿನ ಸ್ಥಳಕ್ಕೆ ಹೋಗಿರಲೇ ಇಲ್ಲ ಮತ್ತು ಅಲ್ಲಿ ಯಾವುದೇ ಪಂಚನಾಮೆಯನ್ನು ಮಾಡಲಿಲ್ಲ ಮತ್ತು ಆರೋಪಿಗಳನ್ನು ದಸ್ತಗಿರಿ ಮಾಡಲಿಲ್ಲ ಮತ್ತು ವಾಹನ ಜಪ್ತು ಮಾಡಲಿಲ್ಲ ಎನ್ನುವುದು ಸರಿಯಲ್ಲ. ವಾಹನದಲ್ಲಿ ಯಾವುದೇ ರೀತಿಯ ಸರಾಯಿ ಟ್ಯೂಬು ಇರಲಿಲ್ಲ ಎನ್ನುವುದು ಸರಿಯಲ್ಲವೆಂದೂ, ಪಂಚನಾಮೆಯನ್ನು ನಮ್ಮ ರಕ್ಷಕರು ಬರೆದರೆಂದೂ, ಪಂಚನಾಮೆ ಬರೆದವರು ಯಾರು ಎನ್ನುವ ಬಗ್ಗೆ ಅದರಲ್ಲಿ ಬರೆದಿಲ್ಲವೆಂದೂ, ಮಾದರಿಯನ್ನು ಸೀಸೆಯಲ್ಲಿ ಕೃತ್ಯ ನಡೆದ ಸ್ಥಳದಲ್ಲಿಯೇ ತೆಗೆದಿದ್ದೆವೆಂದೂ, ಅಲ್ಲಿ ಯಾವುದೇ ಮಾದರಿ ತೆಗೆಯಲಿಲ್ಲ ಎನ್ನುವುದು ಸರಿಯಲ್ಲವೆಂದೂ, ಈ ಘಟನೆಯಲ್ಲಿ ಸಾಕ್ಷಿಯ ಬಗ್ಗೆ ಸುತ್ತಮುತ್ತಲಿನ ಜನರನ್ನು ವಿಚಾರಿಸಲಿಲ್ಲ. ಏಕೆಂದರೆ ಆಗ ಕತ್ತಲೆಯಾಗಿತ್ತೆಂದೂ, ನಮ್ಮ ಕಛೇರಿಯಲ್ಲಿ ವಾರಸುದಾರರಿಲ್ಲದ ಮಾಲುಗಳು ಇರುತ್ತವೆ ಅನ್ನುವುದು ಸರಿಯಲ್ಲವೆಂದೂ, ಅದನ್ನು ಈ ಪ್ರಕರಣಕ್ಕೆ ಶಾಮೀಲುಗೊಳಿಸಿ ಸುಳ್ಳು ಪ್ರಕರಣವನ್ನು ಸೃಷ್ಟಿಸಿದ್ದೇವೆ ಅನ್ನುವುದು ಸರಿಯಲ್ಲವೆಂದೂ, ಅರ್ಜಿದಾರರ ವಾಹನ ಮನೆಯಲ್ಲಿದ್ದುದನ್ನು ತೆಗೆದುಕೊಂಡು ಹೋಗಿ, ಸುಳ್ಳು ಪ್ರಕರಣವನ್ನು ದಾಖಲಿಸಿದ್ದೇವೆ ಅನ್ನುವುದು ಸರಿಯಲ್ಲವೆಂದೂ, ಈ ಪ್ರಕರಣದಲ್ಲಿ ಸಲ್ಲಿಸಲಾದಂತಹ ಎಲ್ಲಾ ದಾಖಲೆಗಳು ಝೆರಾಕ್ಸ್ ಪ್ರತಿಯ ದೃಢೀಕೃತ ನಕಲುಗಳಾಗಿದ್ದು, ಮೂಲ ಪ್ರತಿಗಳನ್ನು ನ್ಯಾಯಾಲಯಕ್ಕೆ ಸಲ್ಲಿಸಲಾಗಿದೆ ಎಂದೂ ಫಾಸ್ಕಲ್ ರೊಡ್ರಿಗ್ಸ್‌ನನ್ನಾಗಲಿ, ಗೋಪಾಲ ನಾಯ್ಕನನ್ನಾಗಲಿ ನಾವು ಸ್ಥಳಕ್ಕೆ ಕರೆದುಕೊಂಡು ಹೋಗಲಿಲ್ಲ ಅನ್ನುವುದು ಸರಿಯಲ್ಲವೆಂದೂ, ಕಛೇರಿಯಲ್ಲಿ ಕುಳಿತು ಸುಳ್ಳು ಪಂಚನಾಮೆ ಸೃಷ್ಟಿಸಿದ್ದೇವೆ ಅನ್ನುವುದು ಸುಳ್ಳೆಂದು ಅರ್ಜಿದಾರನಾದಂತಹ ಆರೋಪಿಯು ಸಿಕ್ಕಿರಲಿಲ್ಲ ಎನ್ನುವುದು ಸರಿಯಲ್ಲ ಮತ್ತು ಆತ ಯಾವುದೇ ಹೇಳಿಕೆಯನ್ನು ನೀಡಲಿಲ್ಲ ಎನ್ನುವುದು ಸರಿಯಲ್ಲವೆಂದೂ, ಅಂಕಿಸಂಖ್ಯೆಗೋಸ್ಕರ ಅರ್ಜಿದಾರನ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವುದಕ್ಕಾಗಿ ಸುಳ್ಳು ಪ್ರಕರಣವನ್ನು ದಾಖಲಿಸಿದ್ದೇವೆ ಅನ್ನುವುದು ಸುಳ್ಳೆಂದೂ ನುಡಿದಿರುತ್ತಾರೆ.

13. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ಡೈರಿಯ ಪ್ರತಿಯನ್ನು ಪಿಡಬ್ಲ್ಯೂ-1 ರವರ ವಿಚಾರಣೆಯ ನಂತರವಾದರೂ ಈ ಪ್ರಾಧಿಕಾರದ ಮೂಲಕ ತರಿಸಲು ಅವಕಾಶವಿತ್ತು. ಆದರೆ ಅದನ್ನು ಎದುರುದಾರರು ತರಿಸಿರುವುದಿಲ್ಲ. ಸರ್ಕಾರದ ಆದೇಶ ಇರುತ್ತಿದ್ದು, ಪ್ರ.ಮಾ.ವರದಿಯ ಪ್ರಕಾರ ಈ ಘಟನೆಯು ಹೊನ್ನಾವರ ತಾಲ್ಲೂಕಿನ ಮಾಳ್ಕೋಡ ಗ್ರಾಮದ ಶರಾವತಿ ನದಿಯ ದಂಡೆಯ ಕಚ್ಚಾ ರಸ್ತೆಯಲ್ಲಿ ನಡೆದಿರುವುದಾಗಿ ಕಂಡುಬರುತ್ತದೆ. ಪಿ.ಡಬ್ಲ್ಯೂ-1 ನೇಯವರು ತನ್ನ ಹೇಳಿಕೆಯಲ್ಲಿ ನುಡಿದಿರುವ ಪ್ರಕಾರ ಹೊನ್ನಾವರ ಕಛೇರಿಯಿಂದ ಘಟನಾ ಸ್ಥಳವು 35 ಕಿ.ಮೀ. ನಷ್ಟು ದೂರದಲ್ಲಿದ್ದುದರಿಂದ ಪ್ರಕರಣದ ಆರೋಪಿಯು ಪರಾರಿಯಾಗಬಹುದೆಂಬ ಕಾರಣದಿಂದ ಮತ್ತು ಮುದ್ದೆಮಾಲುಗಳನ್ನು ಬೇರೆಡೆಗೆ ಸಾಗಿಸಬಹುದೆಂಬ ಕಾರಣದಿಂದ ಜಪ್ತಿ ವಾರೆಂಟ್‌ನ್ನು ಪಡೆದುಕೊಳ್ಳದಿರುವುದು ಕಂಡುಬರುತ್ತದೆ. ಜಪ್ತಿ ವಾರೆಂಟ್‌ನ್ನು ಪಡೆದುಕೊಳ್ಳದಿದ್ದುದು ಫಿರ್ಯಾದುದಾರರು ಕ.ಅ. ಕಾಯ್ದೆ ಕಲಂ 52 ಮತ್ತು 54ರ ಉಲ್ಲಂಘನೆಯಾಗುತ್ತದೆಯೇ ಹೊರತು ಇದೇ ಕಾರಣವನ್ನಿಟ್ಟುಕೊಂಡು ಜಪ್ತಿಯನ್ನು ನಿರಾಕರಿಸಲು ಬರಲಾರದು ಈ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠದ ತೀರ್ಪು ಐಎಲ್‌ಆರ್ 2004 ಕೆಎಆರ್ 527 (ಶ್ರೀ ಸೋಮನಾಥ ಕರೇಬೈಲ್ ವಿರುದ್ಧ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ) ರಲ್ಲಿ ಈ ಕೆಳಗಿನಂತೆ ಉಲ್ಲೇಖಿಸಲಾಗಿದೆ.

In the Case of a search of a vessel, raft, vehicle or animal, the offender will undoubtedly have the opportunity to escape if the officer proposing to conduct the search were to approach a Magistrate to obtain a search warrant before actually conducting the search. That is so, particularly when illicit transport of excisable goods more often than not takes place at odd hours of the day and night to avoid detection, Such offenders are nabbed in the course of routine checks or on the basis of source information received by the excise authorities. To say that a search of a vehicle, Vessel, raft or animal can be conducted only after obtaining a warrant may therefore be unrealistic and may potentially defeat the very object underlying the excise legislation. That is because in the case of excisable goods that are in a state of motion, any delay which is implicit in an attempt to get a search warrant will give the Offender the opportunity to escape or destroy the evidence regarding the offence.

Failure to record in black and white what is obvious may not therefore by itself constitute an illegality so as to render the search or the subsequent proceedings based on the same illegal. Such failure may be only procedural irregularity not affecting the validity of the search.

The seizure of the goods while the same were in motion or were capable of being put into motion should sufficiently satisfy the conscience of the law that no prejudice on account of non recording of the reasons for not obtaining warrant has been caused.

ಪಂಚನಾಮೆಯನ್ನು 7.15 ಗಂಟೆಗೆ ಬರೆದು 7.30 ಗಂಟೆಗೆ ಮುಗಿಸಿರುವುದರಿಂದ ಆ ಸಮಯದಲ್ಲಿ ಕತ್ತಲಾಗಿರುವುದು ಸಹಜವಾಗಿದೆ. ಪಂಚನಾಮೆಯನ್ನು ಬ್ಯಾಟರಿ ಬೆಳಕಿನಿಂದ ಬರೆದಿರುವ ಬಗ್ಗೆ ಅದರಲ್ಲಿ ನಮೂದಿಸಲಾಗಿದೆ ವಾರಸುದಾರರಿಲ್ಲದ ಮುದ್ದೆಮಾಲುಗಳ ಬಗ್ಗೆ ಪ್ರಕರಣವನ್ನು ದಾಖಲಿಸಿ, ಈ ಪ್ರಾಧಿಕಾರಕ್ಕೆ ಮುಂದಿನ ಕ್ರಮಕ್ಕಾಗಿ ಕಳುಹಿಸುವ ಕ್ರಮವನ್ನು ಇಲಾಖೆಯ ಅಧಿಕಾರಿಗಳು ಅನುಸರಿಸುತ್ತಾರೆ. ಆದರೆ ಅದನ್ನು ಇದೇ ಪ್ರಕರಣಕ್ಕೆ ಶಾಮೀಲುಗೊಳಿಸಿ ಸುಳ್ಳು ಪ್ರಕರಣ ಸೃಷ್ಟಿಸುವಂತಹ ಕಾರಣವೇನಿತ್ತು ಎಂಬುವುದನ್ನು ಎದುರುದಾರರ ಪಕ್ಷದವರು ವಿವರಿಸಿಲ್ಲ ವಾಹನವನ್ನು ಮನೆಯಿಂದ ಎಳೆದು ಒಯ್ಯಲು ವಾಹನದ ಕೀಲಿಯನ್ನು ಯಾರು ಕೊಟ್ಟರೆಂಬ ಬಗ್ಗೆಯಾಗಲಿ ಅಥವಾ ಈ ಬಗ್ಗೆ ಯಾವುದಾದರೂ ಸಾಕ್ಷಿಗಳಿದ್ದಲ್ಲಿ ಅದನ್ನು ಹಾಜರುಪಡಿಸಿಲ್ಲ ಮತ್ತು ಈ ಬಗ್ಗೆ ಮೇಲಾಧಿಕಾರಿಗಳಿಗೆ ದೂರು ನೀಡಲಾಗಿದೆಯೇ ಎಂಬ ಬಗ್ಗೆಯೂ ವಿವರಿಸಿಲ್ಲ. ಮೂಲ ಪ್ರತಿಯನ್ನು ಕ್ರಿಮಿನಲ್ ನ್ಯಾಯಾಲಯದಲ್ಲಿ ಹಾಜರುಪಡಿಸಿರುವುದರಿಂದ ಈ ಪ್ರಾಧಿಕಾರದಲ್ಲಿ ಸಲ್ಲಿಸಿರುವ ದೃಢೀಕೃತ ನಕಲುಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ.

14. ಈ ಪ್ರಕರಣದ ಪಂಚಸಾಕ್ಷಿ ನಂ.1 ನೇಯವರಾದ ಫಾಸ್ಕಲ್ ಫ್ರಾನ್ಸಿಸ್ ರೊಡ್ರಿಗ್ಸ್ ಇವರು ದಿನಾಂಕ: 19.03.2003 ರಂದು ಪಂಚನಾಮೆಯಲ್ಲಿನ ವಿಷಯವನ್ನು ಅಲ್ಲಗಳೆದು ಪ್ರತಿಕೂಲ ಸಾಕ್ಷಿಯನ್ನು ನುಡಿದಿದ್ದರೂ ಸಹ ಎ.ಡಿ.ಪಿ. ಯವರ ಅಡ್ಡ ವಿಚಾರಣೆಯಲ್ಲಿ ಕೆಲವೊಂದು ವಿಷಯವನ್ನು ಒಪ್ಪಿಕೊಂಡು ಕೆಲವು ವಿಷಯವನ್ನು ಅಲ್ಲಗಳೆದಿರುತ್ತಾರೆ ಅದೇ ರೀತಿ ಎದುರುದಾರರ ವಕೀಲರ ಮರು ವಿಚಾರಣೆಯಲ್ಲಿಯೂ ಸಹ ಕೆಲವು ವಿಷಯವನ್ನು ಅಲ್ಲಗಳೆದು ತಾನು ಜೀಪಿನಲ್ಲಿ ಹಿಂದುಗಡೆ ಕುಳಿತು ಘಟನಾ ಸ್ಥಳ ಮುಟ್ಟಿರುವುದನ್ನು ಒಪ್ಪಿಕೊಂಡಿರುತ್ತಾರೆ. ಅಲ್ಲದೇ ಅಧಿಕಾರಿಗಳ ಹಂಗಿಗೆ

ಸುಳ್ಳು ಸಾಕ್ಷಿ ಹೇಳುತ್ತಿಲ್ಲವೆನ್ನುವುದನ್ನು ಸಹ ಒಪ್ಪಿಕೊಂಡಿರುತ್ತಾರೆ. ಹೀಗಾಗಿ ಈ ಸಾಕ್ಷಿಯು ಅರ್ಜಿದಾರರಿಗೆ ಸಹಾಯ ಮಾಡುವ ದೃಷ್ಟಿಯಿಂದ ಅರೆಸತ್ಯ ಸಾಕ್ಷಿಯನ್ನು ನುಡಿದಿರುವುದು ಕಂಡುಬರುತ್ತದೆ.

15. ಈ ಎಲ್ಲಾ ಕಾರಣಗಳಿಂದ ಅಭಿಯೋಜನೆ ಪಕ್ಷದವರು ಘಟನೆ ಸಂಭವಿಸಿರುವುದನ್ನು ನಿಸ್ಸಂಶಯವಾಗಿ ನಿರೂಪಿಸಿರುವುದು ಕಂಡುಬರುವುದರಿಂದ ಮೊದಲನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

16. ಅರ್ಜಿದಾರರಾದಂತಹ ಕ್ಷೇತ್ರ ಜಟ್ಟಿ ಗೌಡ ಈ ಪ್ರಾಧಿಕಾರದಲ್ಲಿ ದಿನಾಂಕ: 25.08.2004 ರಂದು ಹಾಜರಾಗಿ ತನ್ನ ಪರ ವಕೀಲರ ಮುಖ್ಯ ವಿಚಾರಣೆಗೆ ಡಿಡಬ್ಲ್ಯೂ-1 ರಂತೆ ಉತ್ತರಿಸುತ್ತಾ, ವಾಹನ ಸಂಖ್ಯೆ: ಕೆಎ-30/ಇ-1375 ನೇಯದು ತನ್ನದೇ ಆಗಿರುತ್ತದೆಂದೂ, ಸದರಿ ವಾಹನಕ್ಕೆ ಸಂಬಂಧಪಟ್ಟ ನೋಂದಣಿ ಪುಸ್ತಕ ತನ್ನ ಹೆಸರಿನಲ್ಲಿರುತ್ತದೆಂದೂ, ದಿನಾಂಕ: 22.02.2002 ರಂದು ಸಾಯಂಕಾಲ 7.00 ಗಂಟೆಗೆ ನನ್ನ ವಾಹನವು ನನ್ನ ಮನೆಯಲ್ಲಿತ್ತೆಂದೂ, ಆ ದಿನ ರಾತ್ರಿ 7.00 ಗಂಟೆಗೆ ಅಥವಾ ಅನಂತರ ನಾನು ವಾಹನ ತೆಗೆದುಕೊಂಡು ಹೊರಗೆ ಹೋಗಲಿಲ್ಲವೆಂದೂ, ಅಬಕಾರಿ ಉಪ ನಿರೀಕ್ಷಕರು ಡಿಂಗಿ ಕಛೇರಿ ಇವರು ನನ್ನ ಗಾಡಿಯನ್ನು ತಪಾಸಣೆ ಮಾಡಿರಲಿಲ್ಲವೆಂದೂ, ತನ್ನ ವಾಹನದಲ್ಲಿ ಸುಮಾರು 20 ಲೀಟರ್ ಆಗುವಷ್ಟು ಕಳ್ಳಭಟ್ಟಿ ಸರಾಯಿ ದೊರೆತಿತ್ತು ಎಂದು ಆರೋಪಿಸಿರುವುದು ಸುಳ್ಳಾಗಿರುತ್ತದೆಂದೂ ಅದರಂತೆ ತನ್ನ ವಾಹನವನ್ನು ಜಪ್ತು ಮಾಡಿ ವರದಿ ಕಳುಹಿಸಿದ್ದಾರೆ ಎನ್ನುವುದು ಸುಳ್ಳೆಂದೂ, ವಾಹನವನ್ನು ಜಪ್ತಿ ಮಾಡಿ ಪಂಚನಾಮೆ ತಯಾರಿಸಿದರು ಎನ್ನುವುದು ಸುಳ್ಳೆಂದೂ, ತನ್ನ ವಿರುದ್ಧ ಹೊನ್ನಾವರದ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಹೂಡಿರುವ ಕ್ರಿಮಿನಲ್ ಮೊಕದ್ದಮೆಯಲ್ಲಿ ತಾನು ನಿರ್ದೋಷಿಯೆಂದು ತೀರ್ಪಾಗಿರುತ್ತದೆಂದೂ ನಂತರ ಮಾನ್ಯ ಎ.ಡಿ.ಪಿ.ಯವರ ಪಾಟಿ ಸವಾಲಿನಲ್ಲಿ ತನ್ನ ಮೇಲೆ ಹೊನ್ನಾವರ ನ್ಯಾಯಾಲಯದಲ್ಲಿ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಜಗಳ ಮಾಡಿದ ಬಗ್ಗೆ ಪ್ರಕರಣ ದಾಖಲು ಮಾಡಿಸಿಕೊಂಡಿರುತ್ತಾರೆಂದೂ, ಅಬಕಾರಿ ನಿರೀಕ್ಷಕರೂ ಕೂಡ ತನ್ನ ಮೇಲೆ ನಾನು ಗಲಾಟೆ ಮಾಡಿದ ಬಗ್ಗೆ ಗುನ್ಹೆ ದಾಖಲಿಸಿಕೊಂಡಿರುತ್ತಾರೆಂದೂ, ತನಗೆ ಕನ್ನಡ ಓದಲು ಬರೆಯಲು ಬರುತ್ತದೆಂದೂ, ನ್ಯಾಯಾಲಯದ ಮುಂದೆ ಹೊನ್ನಾವರ ಅಬಕಾರಿ ಉಪ ನಿರೀಕ್ಷಕರು ತನ್ನ ಮೇಲೆ ಸಾಕ್ಷಿ ಹೇಳಿ ಹೋಗಿರುತ್ತಾರೆ ಆ ದಿನ ಅಬಕಾರಿ ಉಪ ನಿರೀಕ್ಷಕರು, ಹೊನ್ನಾವರ ನ್ಯಾಯಾಲಯದಲ್ಲಿ ಸಾಕ್ಷಿ ನುಡಿದಿರುವುದನ್ನು ನಾನು ಕೇಳಿಸಿಕೊಂಡಿರುತ್ತೇನೆಂದೂ, ನಂತರ ಸಾಕ್ಷಿಯು ಪುನಃ ನುಡಿಯುತ್ತಾ, ತನಗೆ ಕನ್ನಡ ಓದಲು ಬರುವುದಿಲ್ಲವೆಂದೂ, ತಾನು ಪ್ರಾಧಿಕಾರದಿಂದ ತನ್ನ ವಾಹನವನ್ನು ಬಿಡಿಸಿಕೊಂಡು ಹೋಗಿರುತ್ತೇನೆಂದೂ, ಅಬಕಾರಿ ಪ್ರಕರಣದಲ್ಲಿ ತನ್ನ ವಾಹನವನ್ನು ಸರಾಯಿ ಸಾಗಾಣಿಕೆ ಬಗ್ಗೆ ಜಪ್ತಿ ಮಾಡಿದ್ದರು. ಆದ್ದರಿಂದ ಅದನ್ನು ತಾನು ಪ್ರಾಧಿಕಾರದಿಂದ ಮಧ್ಯಂತರ ವಶಕ್ಕೆ ಬಿಡಿಸಿಕೊಂಡು ಹೋಗಿರುತ್ತೇನೆಂದೂ, ಅಬಕಾರಿ ಅಧಿಕಾರಿಗಳಿಗೆ ಹೊಡೆದಾಟ ಪ್ರಕರಣದಲ್ಲಿ ದೋಷಾರೋಪಣಾ ಪಟ್ಟಿ ಸಲ್ಲಿಸುವ ಅಧಿಕಾರ ಇದೆ ಎಂದೂ, ಹೊನ್ನಾವರ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ನನ್ನ ಮೇಲೆ ಆಪಾದನೆ ಹೊರಿಸಿರುವ ಬಗ್ಗೆ ಓದಿ ಹೇಳಿರುತ್ತಾರೆಂದೂ, ಆದರೆ ನ್ಯಾಯಾಧೀಶರು ಏನು ಓದಿ ಹೇಳಿದರು ಎನ್ನುವುದು ತನಗೆ ನೆನಪಿಲ್ಲವೆಂದೂ, ತನ್ನ ಮೇಲೆ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಒಂದೇ ಕೇಸು ದಾಖಲಾಗಿದೆ ತಾನು ಯಾರಿಗೆ ಹೊಡೆದಿದ್ದೇನೆ ಎನ್ನುವ ಬಗ್ಗೆ ತನ್ನ ಮೇಲೆ ಪ್ರಕರಣ ದಾಖಲಾಗಿದೆ ಎನ್ನುವುದು ನನಗೆ ಗೊತ್ತಿಲ್ಲವೆಂದೂ ತಾನು ಅಬಕಾರಿ ನಿರೀಕ್ಷಕರಿಗೆ ತನ್ನ ವಾಹನವನ್ನು ತೆಗೆದುಕೊಂಡು ಹೋಗಬಾರದೆಂದೂ, ಆಕ್ಷೇಪಣೆ ಮಾಡಿದರೂ ಕೂಡ ವಾಹನವನ್ನು ತೆಗೆದುಕೊಂಡು ಹೋಗಿರುತ್ತಾರೆಂದೂ, ನಂತರ ಪುನಃ ಸಾಕ್ಷಿ ಹೇಳುತ್ತಾ, ಅಬಕಾರಿ ನಿರೀಕ್ಷಕರು ತನ್ನ ಮನೆಗೆ ಬಂದು ತನ್ನ ವಾಹನವನ್ನು ತೆಗೆದುಕೊಂಡು ಹೋಗುವಾಗ ಸದರ ಗುನ್ಹೆ ಸ್ಥಳದಲ್ಲಿ ತಾನು ಇರಲಿಲ್ಲವೆಂದೂ, ತಾನು ರಾತ್ರಿ ಮನೆಗೆ ಬಂದ ನಂತರ ತನ್ನ ವಾಹನವನ್ನು ಅಬಕಾರಿ ಉಪ ನಿರೀಕ್ಷಕರು ತೆಗೆದುಕೊಂಡು ಹೋದ ಬಗ್ಗೆ ತನಗೆ ಗೊತ್ತಾಯಿತೆಂದೂ, ಅಬಕಾರಿ ಅಧಿಕಾರಿಗಳಿಗೆ ಈ ಬಗ್ಗೆ ಕೇಳಲಾಗಿ ತನಗೆ ಬೆಳಿಗ್ಗೆ ಬರಲು ತಿಳಿಸಿದರೆಂದೂ, ತಾನು ಬೆಳಿಗ್ಗೆ 11.00 ಗಂಟೆಗೆ ಅಬಕಾರಿ ಕಛೇರಿಗೆ ಹೋದೆನೆಂದೂ, ಆವಾಗ ತನ್ನ ಗಾಡಿಯನ್ನು ಗಲಾಟೆ ಪ್ರಕರಣದಲ್ಲಿ ಜಪ್ತು ಮಾಡಲಾಗಿದೆ ಎಂದು ಅಬಕಾರಿ ಅಧಿಕಾರಿಗಳು ತನಗೆ ತಿಳಿಸಿರುತ್ತಾರೆಂದೂ, ತನ್ನ ಗಾಡಿಯನ್ನು ಅಬಕಾರಿ ಅಧಿಕಾರಿಯವರು ಯಾವುದೇ ಸಂಬಂಧವಿಲ್ಲದೇ ತೆಗೆದುಕೊಂಡು ಹೋದ ಬಗ್ಗೆ ಅಬಕಾರಿ ನಿರೀಕ್ಷಕರ ಮೇಲಾಧಿಕಾರಿಗಳ ಮೇಲೆ ತಾನು ದೂರು ವಗೈರೆ ಕೊಟ್ಟಿಲ್ಲವೆಂದೂ, ತನ್ನ ಮೇಲೆ ಪ್ರಕರಣ ದಾಖಲು ಮಾಡಿದ ಅಬಕಾರಿ ನಿರೀಕ್ಷಕರ ಪರಿಚಯ ತನಗೆ ಇರುವುದಿಲ್ಲವೆಂದೂ, ಅಬಕಾರಿ ಉಪ ನಿರೀಕ್ಷಕರಿಗೆ ತನ್ನ ಮೇಲೆ ಯಾವುದೇ ದ್ವೇಷವಿರುವುದಿಲ್ಲವೆಂದೂ, ಈ ಪ್ರಾಧಿಕಾರದ ಮುಂದೆ ವಿಚಾರಣೆಗೆ ಪ್ರತಿ ಬಾರಿ ತಾನು ಹಾಜರು ಇರುತ್ತಿದ್ದೆ, ಈ ಪ್ರಾಧಿಕಾರದ ಮುಂದೆ ಈ ಪ್ರಕರಣದ ಫಿರ್ಯಾದುದಾರರು ಯಾವ ರೀತಿಯ ಸಾಕ್ಷಿ ನುಡಿದಿದ್ದಾರೆ ಎನ್ನುವುದನ್ನು ತಾನು ಕೇಳಿಕೊಂಡಿರುವುದಿಲ್ಲವೆಂದೂ, ಅಬಕಾರಿ ಉಪ ನಿರೀಕ್ಷಕರು ತನ್ನ ಮೇಲೆ ಅಕ್ರಮ ಸರಾಯಿ ಸಾಗಾಟ ಮಾಡಿದ ಬಗ್ಗೆ ಪ್ರಕರಣವನ್ನು ದಾಖಲು ಮಾಡಿಕೊಂಡು ಜಪ್ತು ಮಾಡಿದ್ದಾರೆ ಎಂದು ಹೇಳುವುದು ಸರಿಯಲ್ಲವೆಂದು ಪ್ರಾಧಿಕಾರದ ಮುಂದೆ ತಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎನ್ನುವುದು ಸರಿಯಲ್ಲವೆಂದೂ ನುಡಿದಿರುತ್ತಾರೆ.

**17. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ಘಟನೆಯು ಸಂಭವಿಸಿರುವುದನ್ನು ಅಭಿಯೋಜನೆ ಪಕ್ಷದವರು ಆಗಲೇ ಸಾಬೀತುಪಡಿಸಿದ್ದು ಘಟನೆ ಸಂಭವಿಸಿದ ದಿನ ಈ ಕೃತ್ಯದಲ್ಲಿ ತಾನು ಭಾಗಿಯಾಗಿಲ್ಲವೆಂಬುವುದನ್ನು ಅರ್ಜಿದಾರ ಸಾಬೀತುಪಡಿಸಬೇಕಾಗಿದ್ದು ಈ ಪ್ರಕರಣದ ಆರೋಪಿಯೇ ವಾಹನದ ಮಾಲೀಕನಾಗಿರುವುದರಿಂದ ಈತ ಘಟನೆ ಸಂಭವಿಸಿರುವುದನ್ನು ಅಲ್ಲಗಳೆದುದನ್ನು ಪರಿಗಣನೆಗೆ ತೆಗೆದುಕೊಳ್ಳಲು ಬರಲಾರದು. ಕ.ಅ. ಕಾಯ್ದೆ 1965ರ ಕಲಂ 43ಎ(2) ರಲ್ಲಿ ಪ್ರಕರಣಕ್ಕೆ ಸಂಬಂಧಿಸಿದಂತೆ ಆರೋಪಿಗಳನ್ನು ಅಭಿಯೋಜನೆಗೆ ಒಳಪಡಿಸಿರಲಿ ಅಥವಾ ಇಲ್ಲದಿರಲಿ ಅಂತಹ ಪ್ರಕರಣದಲ್ಲಿ ಒಳಗೊಂಡಂತಹ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದಿದೆ. ಅಲ್ಲದೇ ಕ್ರಿಮಿನಲ್ ನ್ಯಾಯಾಲಯದಲ್ಲಿ ಆರೋಪಿಯು ನಿರ್ದೋಷಿಯಾಗಿದ್ದಲ್ಲಿ ಅದನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲವೆಂದು ಈ ಬಗ್ಗೆ ಗೌರವಾನ್ವಿತ ಉಚ್ಚನ್ಯಾಯಾಲಯ ಬೆಂಗಳೂರು ರವರ ತೀರ್ಪು ಡಿ.ಎಸ್.ವಿಜಯ ಕುಮಾರ್ ವಿರುದ್ಧ ಡೆಪ್ಯುಟಿ ಕನ್ಸರ್ವೇಟರ್ ಆಫ್ ಫಾರೆಸ್ಟ್, ಹಾಸನ (ಐಎಲ್‌ಆರ್-2002, ಕೆ.ಎಆರ್ 1375) ನೇದರಲ್ಲಿಯೂ ಈ ಕೆಳಗಿನಂತೆ ತೀರ್ಪಾಗಿದೆ. ಈ ಆದೇಶವನ್ನು ಈ ಪ್ರಕರಣದಲ್ಲಿ ಆಧಾರವಾಗಿಟ್ಟುಕೊಳ್ಳಲಾಗಿದೆ.

The Contention of the owner of the seized vehicle that non-filing of a criminal case or acquittal of the accused involved in illegal transport of forest produce, takes away the jurisdiction of the Authorised Officers to initiate confiscation proceedings under section 71A, hence confirmed the order of confiscation.

ಮನೆಯಲ್ಲಿ ಇಟ್ಟಂತಹ ವಾಹನವನ್ನು ಫಿರ್ಯಾದಿ ಕಡೆಯವರಿಗೆ ಒಯ್ಯುವುದಕ್ಕೆ ವಾಹನದ ಕೀಲಿಯನ್ನು ಯಾರು ಕೊಟ್ಟರು ಎಂಬುವುದನ್ನು ವಿವರಿಸಿಲ್ಲ ಅಲ್ಲದೇ ಈ ಬಗ್ಗೆ ಛಾಯಾಚಿತ್ರ ಮೊದಲಾದಂತಹ ಯಾವುದಾದರೂ ದಾಖಲೆಗಳಿದ್ದಲ್ಲಿ ಅದನ್ನು ಒದಗಿಸಿಲ್ಲ. ಅರ್ಜಿದಾರರು ಪಾಟಿ ಸವಾಲಿನಲ್ಲಿ ಅಬಕಾರಿ ಇಲಾಖೆಯವರು ಹೊಡೆದಾಟದ ಪ್ರಕರಣವನ್ನು ದಾಖಲಿಸಿರುವುದಾಗಿ ತಿಳಿಸಿದ್ದು, ಸದ್ರಿ ಸಾಕ್ಷಿದಾರರು ಮಾನ್ಯ ಜೆ.ಎಂ.ಎಫ್.ಸಿ. ಹೊನ್ನಾವರದಲ್ಲಿ ಅಬಕಾರಿ ಪ್ರಕರಣವನ್ನು ಎದುರಿಸಿದ್ದರೂ ಸಹ ತಾನು ಹೊಡೆದಾಟದ ಪ್ರಕರಣವನ್ನು ಎದುರಿಸಿದ್ದಾಗಿ ಸುಳ್ಳು ಸಾಕ್ಷಿಯನ್ನು ನುಡಿದಿರುವುದು ಕಂಡುಬರುತ್ತದೆ. ಅಲ್ಲದೇ ಒಮ್ಮೆ ತನಗೆ ಕನ್ನಡ ಓದಲು ಬರುತ್ತದೆಂದು ತಿಳಿಸಿ, ಇನ್ನೊಮ್ಮೆ ಬರುವುದಿಲ್ಲವೆಂದು ತಿಳಿಸಿದ್ದು ಇವರ

ಹೇಳಿಕೆಗೆ ಒಂದಕ್ಕೊಂದು ತಾಳಮೇಳವಿಲ್ಲದೆ ಮುಟ್ಟುಗೋಲು ಕ್ರಮದಿಂದ ನುಣುಚಿಕೊಳ್ಳುವುದಕ್ಕಾಗಿ ಈ ರೀತಿಯ ಅಸಂಬದ್ಧ ಹೇಳಿಕೆಯನ್ನು ನೀಡಿರುವುದು ಸ್ಪಷ್ಟವಾಗಿ ಮನವರಿಕೆಯಾಗುತ್ತದೆ. ಹೀಗಾಗಿ ಎರಡನೇ ವಿವಾದಾಂಶವನ್ನು ನಕಾರಾತ್ಮಕವಾಗಿ ಉತ್ತರಿಸಲಾಗಿದೆ.

18. ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸರಾಯಿಯನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 62/2001 ದಿನಾಂಕ: 15.07.2004 ಹಾಗೂ ಕ್ರಿಮಿನಲ್ ಅಪೀಲ್ ಸಂಖ್ಯೆ: 183/2001 ದಿನಾಂಕ: 21.07.2004 ರಂತೆ ಈ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತಾ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ,

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43ಎ(1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೊನ್ನಾವರ ಡಿಂಗಿ ಕಛೇರಿಯ ಗುನ್ಹೆ ಸಂಖ್ಯೆ: 02/2001-02, ದಿನಾಂಕ: 22.02.2002 ರಲ್ಲಿ ಜಪ್ತಿಯಾದಂತಹ ಯಮಹಾ ಮೋಟರ್ ಸೈಕಲ್ ಸಂಖ್ಯೆ: ಕೆಎ-30/ಇ-1375 ನೇದನ್ನು ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಈ ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ಸಿಆರ್ಎಂ/ಡಿಟಿಸಿಆರ್/176/2001-2002 ದಿನಾಂಕ: 17.01.2003 ನೇದರಂತೆ ಈ ಪ್ರಕರಣದಲ್ಲಿ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿರುವ ವಾಹನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸ್ವಿಯ ಸೆಪ್ಟೆಂಬರ್ ತಿಂಗಳ 30ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ ನಂತರ ಬೆರಳಚ್ಚು ಮಾಡಿಸಿ, ಬೆರಳಚ್ಚಿಸಿದ ಪ್ರತಿಯನ್ನು ತಿದ್ದಿದ ನಂತರ ಗಣಕೀಕೃತಗೊಳಿಸಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ.ನಂ.1:- ಎ.ಎ. ಶೇಖ್, ಅ.ಉ.ನಿ.
ಪ್ರಾ.ಸಾ.ನಂ.2:- ಫಾಸ್ಕಲ್ ಫ್ರಾನ್ಸಿಸ್ ರಾಡ್ರಿಗ್ಸ್

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

ಡಿ.ಡಬ್ಲ್ಯೂ.1:- ಕ್ಷೇತ್ರ ಜಟ್ಟಿ ಗೌಡ

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

| | | |
|---|---|---|
| ನಿಶಾನೆ ಪಿ1 | : | ಮಹಜರ |
| ನಿಶಾನೆ ಪಿ1ಎ | : | ಮಹಜರ ಮೇಲಿನ ಫಿರ್ಯಾದುದಾರರ ಸಹಿ |
| ನಿಶಾನೆ ಪಿ1ಬಿ | : | ಮಹಜರ ಮೇಲಿನ ಪಂಚಸಾಕ್ಷಿದಾರ ನಂ.1 ನೆಯವರ ಸಹಿ |
| ನಿಶಾನೆ ಪಿ1ಸಿ | : | ಪಂಚಸಾಕ್ಷಿ ನಂ.2 ನೆಯವರ ಸಹಿ |
| ನಿಶಾನೆ ಪಿ2 | : | ಪ್ರ.ಮಾ. ವರದಿ |
| ನಿಶಾನೆ ಪಿ2ಎ | : | ಪ್ರ.ಮಾ. ವರದಿ ಮೇಲಿನ ಸಹಿ |
| ನಿಶಾನೆ ಪಿ3 | : | ಸ್ವತ್ತಿನ ಪಟ್ಟಿ |
| ನಿಶಾನೆ ಪಿ3ಎ | : | ಸ್ವತ್ತಿನ ಪಟ್ಟಿಯ ಮೇಲಿನ ಸಹಿ |
| ನಿಶಾನೆ ಪಿ4 | : | ರಾಸಾಯನಿಕ ವಿಶ್ಲೇಷಣಾ ವರದಿ |
| ನಿಶಾನೆ ಪಿ4ಎ | : | ರಾಸಾಯನಿಕ ವಿಶ್ಲೇಷಣಾ ವರದಿಯ ಮೇಲಿನ ಸಹಿ |

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

- ಇಲ್ಲಾ -

**ಕೆ.ಸಿ. ಹರಿದಾಸ್**

ಪಿ.ಆರ್. 1460 ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

## DEPARTMENT OF COMMERCIAL TAXES

**Office of the Commissioner of Commercial Taxes in Karnataka, Gandhinagar, Bangalore**

**NOTIFICATION No.PTL:CR-23/2004-05, dated: 21st September 2004**

In exercise of the powers vested under sub-section (4) of section 7-A of the Karnataka Tax on Professions, Trades, calling and Employment Act 1976, I, Ashok Kumar C. Manoli, Commissioner of Commercial Taxes, Karnataka do hereby notify that out of the employers eligible for self-assessment under sub-section (1) for the year ending 31st March 2004, the following employers are selected for the purpose of scrutiny in entirety of the assessment records and in respect of such cases so found warranted, the assessing authorities concerned are directed to make assessments under sub-section (3) of Section 7 of the Act, namely:-

1) Educational Institutions
2) Works contractors
3) Establishments running Cinema Theatres
4) Establishments running Chit Funds
5) Establishments running Lodging Houses, Hotels and Restaurants
6) Establishments running Hospitals and Nursing Homes
7) The Employers who have not submitted complete returns for the year on or before 30th May 2004.

**ASHOK KUMAR C. MANOLI**

P.R. 1457 Commissioner of Commercial Taxes (K) Bangalore.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಚಾಮರಾಜಪೇಟೆ, ಬೆಂಗಳೂರು-18 ಇವರ ನಡವಳಿಕೆಗಳು**

**ಕ್ರಮ ಸಂಖ್ಯೆ: ಎಆರ್‌ಬಿ 45/ದಾವಾ/ಮಾ.ಸ್ಥಿ/7/2004-05, ದಿನಾಂಕ: 6ನೇ ಅಕ್ಟೋಬರ್ 2004**

**ವಿಷಯ:** ಶ್ರೀ ವೈ.ಎಂ. ರಾಮಚಂದ್ರ ಬಿನ್ ಲೇಟ್ ಮುನಿಸ್ವಾಮಪ್ಪ, ಸುಬೇದಾರಪಾಳ್ಯ, ಯಶವಂತಪುರ, ಬೆಂಗಳೂರು-22 ಇವರು ಶ್ರೀಮತಿ ಎಸ್.ಬಿ. ರುಕ್ಮಿಣಿಬಾಯಿ ಕೋಂ ಲೇಟ್ ಕೆ. ಸುಬ್ಬೋಜಿರಾವ್ ನಂ.16, 6ನೇ ಎ ಕ್ರಾಸ್, ಸುಭೇದಾರ್‌ಪಾಳ್ಯ, ಯಶವಂತಪುರ, ಬೆಂಗಳೂರು-22, ಈ ಸ್ವತ್ತನ್ನು ದಿನಾಂಕ: 19.03.2004 ರಂದು ನಡೆದ ಬಹಿರಂಗ ಹರಾಜಿನಲ್ಲಿ ಖರೀದಿಸಿದ್ದು, ಈ ಮಾರಾಟವನ್ನು ಖಾಯಂಗೊಳಿಸುವ ಬಗ್ಗೆ.

**ಉಲ್ಲೇಖ:**
1) ಅವಾರ್ಡ್ ನಂ. ಡಿಆರ್‌ಬಿ-2/ಡಿ/1450/98-99, ದಿನಾಂಕ: 09.02.2001.
2) ಅಮಲ್ಜಾರಿ ಅರ್ಜಿ ಸಂಖ್ಯೆ: ಎಆರ್‌ಬಿ11(45)ಸಿಇಪಿ 2843/2001-02.
3) ಬಾಕಿದಾರನ ವಾಸದ ವಿಳಾಸದಲ್ಲಿ ಅಂಟಿಸಲಾದ ನಮೂನೆ 8 ಮತ್ತು 9ರ ನೋಟೀಸ್ ಮತ್ತು ಮಹಜರ್ ವರದಿ.
4) ಬಿಡ್‌ದಾರರು ಬ್ಯಾಂಕಿಗೆ ಹಣ ಪಾವತಿಸಿದ ರಸೀತಿಗಳು.
5) ಮಾರಾಟಾಧಿಕಾರಿಯವರ ವರದಿ.

**ಪ್ರಸ್ತಾವನೆ:**

ಶ್ರೀಮತಿ ಎಸ್.ಆರ್. ಜಯಲಕ್ಷ್ಮಿ ಕೋಂ ಶ್ರೀ ಟಿ.ಎಸ್. ರಾಜಾರಾವ್ ಮತ್ತು ಶ್ರೀಮತಿ ಎಸ್.ಬಿ. ರುಕ್ಮಿಣಿಬಾಯಿ ಕೋಂ ಲೇಟ್ ಕೆ. ಸುಬ್ಬೋಜಿರಾವ್, ಇವರುಗಳು ಶ್ರೀ ತ್ಯಾಗರಾಜ ಕೋ-ಆಪ್. ಬ್ಯಾಂಕ್ ಲಿ., ಎಸ್.ಆರ್. ಕಾಲೋನಿ, ಬೆಂಗಳೂರು ಈ ಬ್ಯಾಂಕಿನ ಸದಸ್ಯರಾಗಿದ್ದು, ಶ್ರೀಮತಿ ಎಸ್.ಆರ್. ಜಯಲಕ್ಷ್ಮೀ ಕೋಂ ಶ್ರೀ ಟಿ.ಎಸ್. ರಾಜಾರಾವ್ ಎಂಬುವವರು ಪತ್ರಿಕೋದ್ಯಮದ ಅಭಿವೃದ್ಧಿಯ ಉದ್ದೇಶಕ್ಕಾಗಿ ಯಂತ್ರೋಪಕರಣಗಳ ಖರೀದಿಗಾಗಿ ದಿನಾಂಕ: 13.10.1996 ರಂದು ರೂ.3,00,000/- ಗಳನ್ನು (ಮೂರು ಲಕ್ಷ ರೂಪಾಯಿಗಳು ಮಾತ್ರ) ಸಾಲವಾಗಿ ಪಡೆದು ಈ ಸಾಲಕ್ಕೆ ಸಾಲಗಾರರ ಅತ್ತೆಯವರಾದ ಶ್ರೀಮತಿ ಎಸ್.ಬಿ. ರುಕ್ಮಿಣಿಬಾಯಿ ಕೋಂ ಲೇಟ್ ಕೆ. ಸುಬ್ಬೋಜಿರಾವ್‌ರವರಿಗೆ ಸೇರಿದ ಸ್ವಯಾರ್ಜಿತ ಆಸ್ತಿ ನಂ.16, 6ನೇ ಎ ಕ್ರಾಸ್, ಸುಭೇದಾರ್‌ಪಾಳ್ಯ, ಯಶವಂತಪುರ, ಬೆಂಗಳೂರು-22, ವಿಸ್ತೀರ್ಣ ಪೂರ್ವ-ಪಶ್ಚಿಮ 15 ಅಡಿಗಳು. ಉತ್ತರ-ದಕ್ಷಿಣ 40 ಅಡಿಗಳು ಅಳತೆಯ ನಿವೇಶನದಲ್ಲಿ ಆಸ್ ಫಾರ್ ಸೀಟ್ ಛಾವಣಿಯ ಮನೆಯನ್ನು ಬ್ಯಾಂಕಿಗೆ ಆಧಾರ ಮಾಡಿ ರಾಜಾಜಿನಗರ ಉಪನೋಂದಣಾಧಿಕಾರಿಯವರ ಕಛೇರಿಯಲ್ಲಿ ಕ್ರ.ಸಂ.3147 ರಂತೆ ದಿನಾಂಕ: 23.09.1996 ರಂದು ಡೆಪಾಸಿಟ್ ಆಫ್ ಟೈಟಲ್ ಡೀಡ್‌ನ್ನು ನೋಂದಣಿ ಮಾಡಿಕೊಟ್ಟಿರುತ್ತಾರೆ. ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಬಂಧನೆಗಳ ಪ್ರಕಾರ ಸಾಲಗಾರರಾದ ಶ್ರೀಮತಿ ಎಸ್.ಆರ್. ಜಯಲಕ್ಷ್ಮೀ ಕೋಂ ಶ್ರೀ ಟಿ.ಎಸ್. ರಾಜಾರಾವ್ ಎಂಬುವವರು ಬ್ಯಾಂಕಿನ ಸಾಲದ ಹಣವನ್ನು ಮರುಪಾವತಿಸದ ಪ್ರಯುಕ್ತ ಪ್ರಧಾನ ವ್ಯವಸ್ಥಾಪಕರು, ಶ್ರೀ ತ್ಯಾಗರಾಜ ಕೋ-ಆಪ್. ಬ್ಯಾಂಕ್ ಲಿ., ಬೆಂಗಳೂರು ರವರು ಉಲ್ಲೇಖ (1) ರಲ್ಲಿ ನಮೂದಿಸಿರುವ ಆದೇಶದ ಮೂಲಕ ಡಿಕ್ರಿಯನ್ನು ಪಡೆದಿರುತ್ತಾರೆ. ಉಲ್ಲೇಖ (2) ರಲ್ಲಿ ನಮೂದಿಸಿರುವ ಈ ಕಛೇರಿಯ ಆದೇಶದ ಮೂಲಕ ಅಮಲ್ಜಾರಿ ಆಗಿರುತ್ತದೆ. ಸದರಿ ಆದೇಶಗಳ ಮೇರೆಗೆ ಸಹಕಾರ ಅಭಿವೃದ್ಧಿ ಅಧಿಕಾರಿ ಹಾಗೂ ಮಾರಾಟಾಧಿಕಾರಿ, ನಿಯಮ 441, ಶ್ರೀ ತ್ಯಾಗರಾಜ ಕೋ-ಆಪ್. ಬ್ಯಾಂಕ್ ಲಿ., ಬೆಂಗಳೂರು ರವರು ಶ್ರೀಮತಿ ಎಸ್.ಬಿ. ರುಕ್ಮಿಣಿಬಾಯಿ ಕೋಂ ಲೇಟ್ ಕೆ. ಸುಬ್ಬೋಜಿರಾವ್ ಎಂಬುವರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 89 ಮತ್ತು ನಿಯಮಗಳು 1960 ನಿಯಮ 38 ರನ್ವಯ ದಿನಾಂಕ: 19.03.2004 ರಂದು ಬಹಿರಂಗ ಹರಾಜು ಮೂಲಕ ಶ್ರೀ ವೈ.ಎಂ. ರಾಮಚಂದ್ರ, ಸುಬೇದಾರ್‌ಪಾಳ್ಯ, ಯಶವಂತಪುರ, ಬೆಂಗಳೂರು-22 ಇವರಿಗೆ ರೂ.3,95,000/- ಗಳಿಗೆ (ರೂ. ಮೂರು ಲಕ್ಷ ತೊಂಭತ್ತೈದು ಸಾವಿರಗಳು ಮಾತ್ರ) ಮಾರಾಟ ಮಾಡಿರುತ್ತಾರೆ. ಮಾರಾಟದ ಹಣವು ಮೌಲ್ಯಮಾಪಕರು ಆಸ್ತಿಯ ಬೆಲೆಯನ್ನು ನಿಗದಿಪಡಿಸಿರುವ ಬೆಲೆಗಿಂತ ಹೆಚ್ಚಿನದಾಗಿರುತ್ತದೆ. ಆಸ್ತಿಯನ್ನು ಖರೀದಿಸಿದ ಶ್ರೀ ವೈ.ಎಂ. ರಾಮಚಂದ್ರರವರು ದಿನಾಂಕ: 19.03.2004 ರಂದು ಬ್ಯಾಂಕಿನ ರಸೀದಿ ಸಂಖ್ಯೆ: 1842 ರಂತೆ ರೂ.1,60,000/- ಗಳನ್ನು ಮತ್ತು ದಿನಾಂಕ: 30.04.2004 ರಂದು ರಸೀತಿ ಸಂಖ್ಯೆ: 1358 ರಂತೆ 3,35,000/- ಗಳನ್ನು ಪಾವತಿಸಿರುತ್ತಾರೆಂದು ಮಾರಾಟಾಧಿಕಾರಿಯವರು ಉಲ್ಲೇಖ (5) ರಂತೆ ವರದಿ ಮಾಡಿ ದಿನಾಂಕ: 19.03.2004 ರಂದು ಬಹಿರಂಗ ಹರಾಜು ಮೂಲಕ ಮಾರಾಟ ಮಾಡಿರುವ ಸ್ಥಿರಸ್ವತ್ತಿನ ಮಾರಾಟದ ಕ್ರಮಗಳನ್ನು ಶ್ರೀ ವೈ.ಎಂ. ರಾಮಚಂದ್ರರವರ ಹೆಸರಿಗೆ ಖಾಯಂಗೊಳಿಸಿ ದೃಢೀಕರಣ ಪತ್ರ ನೀಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.-

**ಆದೇಶ**

ಎಂ.ಡಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ಆದ ನಾನು ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ 69 ಸಿಎಲ್‌ಎಂ 2001, ದಿನಾಂಕ: 21.11.2001 ರನ್ವಯ ಪ್ರತ್ಯಾಯೋಜನೆಯಾದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 89ಎ ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀಮತಿ ಎಸ್.ಬಿ. ರುಕ್ಮಿಣಿಬಾಯಿ ಕೋಂ ಲೇಟ್ ಕೆ. ಸುಬ್ಬೋಜಿರಾವ್‌ರವರ ಸ್ಥಿರ ಸ್ವತ್ತು, ನಂ.16, 6ನೇ ಎ ಕ್ರಾಸ್, ಸುಭೇದಾರ್‌ಪಾಳ್ಯ, ಯಶವಂತಪುರ, ಬೆಂಗಳೂರು-22, ನಿವೇಶನದ ಅಳತೆ ಪೂರ್ವ-ಪಶ್ಚಿಮ 15 ಅಡಿಗಳು, ಉತ್ತರ-ದಕ್ಷಿಣ 40 ಅಡಿಗಳು, ಚೆಕ್ಕುಬಂದಿ ಉತ್ತರಕ್ಕೆ: ರಸ್ತೆ, ದಕ್ಷಿಣಕ್ಕೆ: ಖಾಸಗಿ ಸ್ವತ್ತು, ಪೂರ್ವಕ್ಕೆ: ಶ್ರೀಮತಿ ಎಲ್ಲೋಬಾಯಿ ಸ್ವತ್ತು, ಪಶ್ಚಿಮಕ್ಕೆ: ಖಾಸಗಿ ಆಸ್ತಿ ನಂ.7, ಇರುವ ಆಸ್ತಿಯನ್ನು ಮಾರಾಟಾಧಿಕಾರಿಯವರು ದಿನಾಂಕ: 19.03.2004 ರಂದು ನಡೆಸಿದ ಬಹಿರಂಗ ಹರಾಜಿನಲ್ಲಿ ಶ್ರೀ ವೈ.ಎಂ. ರಾಮಚಂದ್ರ ಬಿನ್ ಲೇಟ್ ಮುನಿಸ್ವಾಮಪ್ಪ, ಸುಭೇದಾರ್‌ಪಾಳ್ಯ, ಯಶವಂತಪುರ, ಬೆಂಗಳೂರುರವರಿಗೆ

ರೂ.3,95,000/- ಗಳಿಗೆ (ರೂ. ಮೂರು ಲಕ್ಷ ತೊಂಭತ್ತು ಐದು ಸಾವಿರಗಳು ಮಾತ್ರ) ಮಾರಾಟ ಮಾಡಿದ್ದು, ಶ್ರೀ ವೈ.ಎಂ. ರಾಮಚಂದ್ರರವರು ಮಾರಾಟದ ಪೂರ್ಣ ಹಣವನ್ನು ನಿಗದಿತ ಅವಧಿಯೊಳಗೆ ಡಿಕ್ರಿದಾರ ಬ್ಯಾಂಕಿಗೆ ಪಾವತಿಸಿರುವ ಪ್ರಯುಕ್ತ ಮಾರಾಟಾಧಿಕಾರಿಯವರು ದಿನಾಂಕ: 19.03.2004 ರಂದು ಬಹಿರಂಗ ಹರಾಜು ಮೂಲಕ ಮಾರಾಟ ಮಾಡಿರುವ ಸ್ವತ್ತನ್ನು ಶ್ರೀ ವೈ.ಎಂ. ರಾಮಚಂದ್ರರವರ ಹೆಸರಿಗೆ ಮಾರಾಟವನ್ನು ದೃಢೀಕರಿಸಿ ಖಾಯಂಗೊಳಿಸಲಾಗಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 6.10.2004 ರಂದು ಹೊರಡಿಸಲಾಗಿದೆ.

ಪಿ.ಆರ್. 1461 ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು.

**KARNATAKA POWER TRANSMISSION CORPORATION LIMITED**

**Office of the Executive Engineer Elecl., Major Works Division, KPTCL, N.R. Mohalla, Mysore-7**

**DRAFT NOTIFICATION No. EEE/AEE(O)/MWD/MYS/2423-25, Dated: 25th August 2004**

Karnataka Power Transmission Corporation Limited has formulated a scheme under section 28 and clause (e) of section 18 of the Electricity supply Act 1948 and the scheme is herewith published in pursuance of section 29(2) of the said Act, this notification is issued for information of the license holders and any other concerned persons. Particulars of the scheme are as hereunder:

| | |
|---|---|
| Name of the Work | Construction of 220 KV D/C line from proposed 400/220 KV Bastipura station to existing 220/66 KV Station at Kadakola |
| Salient Features and | To improve Voltage condition, Maintain reliable Power supply. |
| Areas Passing through | Village Limits of Bastipura, Kuragalli (Forest Land), Kuragalli Lingadevaru Koppalu, ilawala village, Badregowdana Koppalu, Belavadi Village, Basavanapura Limits, Madagalli limits, Sahukar Hundi Limits, Dasana Koppalu Limits, K.G. Koppalu, Kote Hundi, Kalavadi village, Doddadahalli, K.N. Hundi village, Kadakola. |
| Approximate length of the line | 27.21 km. |
| Approximate Cost | 984.675 Lakhs |

KPTCL shall have and exercise all powers which the telegraph authorities possess under part-III of the Indian Telegraph Act 1985 (13 of 1985) for implementation of the above said scheme. Any objections regarding the above scheme shall be sent to the Executive Engineer Elecl., Major works Division, KPTCL, Mysore-7 within two months from the date of Publication of this notification for KPTCL's, pursuance.

P.D.70 Executive Engineer Elecl., KPTCL, M.W. Division, Mysore.

**PUBLIC NOTICE**

**CONOCO LUBRICANT (INDIA) PRIVATE LIMITED**

**Registered Office: 14th Floor, B-Wing, Mittal Towers, M.G. Road, Bangalore-560 097**

Notice is hereby given for general information that the members of Conoco Software (India) Private Limited at an Extraordinary General Meeting of the company held on 29th September 2004 at its Registered Office, have passed the following Special Resolution to wind up the above Company voluntarily:

"RESOLVED THAT having regard to the declaration made by the Board of Directors dated: 26th August 2004 and delivered to the Registrar of Companies under section 488 of the Companies Act, 1956, stating that the Company has no dabts at the date of declaration thereof, the Company Conoco Lubricant (India) Private Limited having its Registered Office at 14th Floor, B-Wing, Mittal Towers, M.G. Road, Bangalore-560 097, be wound up voluntarily, pursuant to Section 484 (1) (b) of the Companies Act, 1956 and the consent of shareholders of the Company be and is hereby accorded for the voluntary winding up of the Company.

RESOLVED FURTHER that Mrs. Vanishri S, Advocate, be and is hereby appointed as an honorary Liquidator of the Company for the purposes of winding up of the Company pursuant to the provisions of Section 490 of the Companies Act, 1956."

RESOLVED FURTHER THAT Mrs. Vanishri S, the honorary Liquidator be and is hereby empowered to exercise all powers as provided in sub-clauses (i) to (iv) of sub-section (2) of Section 457 of the Companies Act, 1956."

Date: 29th September 2004 By Order of the Board

Place: Singapore Director.

THE COMPANIES ACT, 1956

**FORM NO.151**

(See Rule 315)

**Members' voluntary winding-up-Notice of Appointment of liquidator**

(Pursuant to section 516)

| | |
|---|---|
| Name of the Company | CONOCO LUBRICANT (INDIA) PRIVATE LIMITED |
| Registration No. | 28826 |
| Authorised Capital | Rs. 1,95,00,000/- |
| Registered Office | 14th Floor, B-Wing, Mittal Towers, M.G. Road, Bangalore-560 097 |
| Nature of Business | |
| Name and address of Liquidator | Vanishri S, ADVOCATE, 1259, 14th Floor, B-Wing, Mittal Towers, MG Road, Bangalore-560001 |
| Date of Appointment | 27th August 2004 |
| By whom appointed | By a resolution of the shareholders of the Company |

Date: 3rd October 2004
Place: Bangalore

For Conoco Lubricant (India) Private Limted,
Liquidator.

P.D.71

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಶಿವನ ಹಳ್ಳಿ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಶ್ರೀ ನವೀನ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 499ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1) ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:499:2003-04:162, ದಿನಾಂಕ: 12.4.2004.
2) ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ:ಉನಿಕ:ಕಗಗು:499:2004-05:5848, ದಿನಾಂಕ: 3.8.2004.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಶಿವನ ಹಳ್ಳಿ ಗ್ರಾಮದ ಸರ್ವೆ ನಂ.154 ರಲ್ಲಿ ಶ್ರೀ ನವೀನ್ ರವರಿಗೆ 2.00 ಎಕರೆಗೆ ದಿನಾಂಕ: 20.3.2002 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (2) ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.73,008/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2 ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಸರ್ಕಾರದ ಅಧಿಸೂಚನೆ-III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.7.94 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ ಸಂಖ್ಯೆ: ಗಭೂಇ:ಡಿ.ಸಿ.ಬಿ.:ಕಗಗು:499:2004-05/9385, ದಿನಾಂಕ: 1ನೇ ಅಕ್ಟೋಬರ್ 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ ಶಿವನಹಳ್ಳಿ ಗ್ರಾಮದ ಸರ್ವೆ ನಂ.154 ರಲ್ಲಿ 2.00 ಎಕರೆಗೆ ಮಲ್ಟಿಕಲರ್ ಗ್ರಾನೈಟ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ: 499ನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದ ಕಾರಣ ತಕ್ಷಣದಿಂದ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.-

ಪಿ.ಆರ್. 1454

ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

**PROCEEDINGS OF THE REGISTERING AUTHORITY AND REGIONAL TRANSPORT OFFICER, INDIRANAGAR, BANGALORE (EAST), BANGALORE-38**

**Present:** Afzal Ahmed Khan, Regional Transport Officer & Registering Authority, Indiranagar, Bangalore (East).

**Sub:** Cancellation of registration certificate in respect of MYZ-4951 (HGV) Vehicle-Reg.

**Ref:** Application dated: 04.10.2004 from Sri Ravindra N., No.61, Seetharamapalya, Mahadevapura, Bangalore-48.

**PREAMBLE:**

The registered owner M.V. bearing registration No. MYZ-4951 (HGV) Sri N. Ravindra, S/o Sri Narayana Reddy, No.61, Seetharamapalya, Mahadevapura, Bangalore-48 has surrendered the vehicle documents in this office on 4.10.2004, requesting to cancellation of registration certificate of M.V. MYZ-4951 HGV. As could be seen from the records of M.V. MYZ-4951 HGV is 1975 model it is more than 29 years old the tax paid upto 30.11.2004 and as per the request of the applicant the MV is in scarping condition, therefore he requested for cancellation of registration and registration certificate.

In view of the above facts I pass the following:-

**ORDER No. RTO.BNG.E.RGN/TR.PR/MYZ-4951/04-05, Dated: 6th October 2004**

In exercise of the powers vested under Sec.55(1) of the Motor Vehicle Act, 1988, I Afzal Ahmed Khan, Registering Authority & Regional Transport Officer, Bangalore (East) do hereby cancel the registration & Registration Certificate of bearing MV No.MYZ-4951 HGV subject in condition that he shall pay arrears of tax and settle up of DSA cases if any detected in later.

| | | |
|---|---|---|
| 1 | M.V.No. | MYZ-1975 |
| 2 | Class of Vehicle | HGV |
| 3 | Type of Body | OPEN |
| 4 | Chassis No. | 344002570237 |
| 5 | Engine No. | 692D015701426 |
| 6 | Year of Manufacture | 1975 |

**AFZAL AHMED KHAN**

P.R. 1462 Regional Transport Officer & Registering Authority, Indiranagar, Bangalore (East).

**ಪ್ರಧಾನ ಸಿವಿಲ್ ನ್ಯಾಯಾಧೀಶರು (ಕಿ.ಶ್ರೇ) ಮತ್ತು ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳರವರ ನ್ಯಾಯಾಲಯ, ಶಿಡ್ಲಘಟ್ಟ**

**ಪ್ರಕಟಣೆ ನಿಯಮ 457(2) ದಂಡ ಪ್ರಕ್ರಿಯಾ ಸಂಹಿತೆ ದಿನಾಂಕ: 5ನೇ ಅಕ್ಟೋಬರ್ 2004**

ಶಿಡ್ಲಘಟ್ಟ ಪುರ ಠಾಣೆ ಪೊಲೀಸರ ಮೊಕದ್ದಮೆ ಸಂಖ್ಯೆ: ಸಿಆರ್:29-00, ಪಿ.ಎಫ್. ಸಂಖ್ಯೆ: 18-00, ದಿನಾಂಕ: 23.06.2000 ರಲ್ಲಿ ಪೊಲೀಸರು ವಶಪಡಿಸಿಕೊಂಡ ಸ್ವತ್ತುಗಳಿಗೆ ವಾರಸುದಾರರು ಇಲ್ಲದೆ ವಿಲೇವಾರಿಯಾಗದೆ ಉಳಿದಿದೆ. ಆದ್ದರಿಂದ ಈ ಪ್ರಕಟಣೆಯ 30 ದಿನಗಳ ಒಳಗಾಗಿ ಸದರಿ ಸ್ವತ್ತಿನ ಸಂಬಂಧ ಪಟ್ಟವರು ಯಾರಾದರೂ ಇದ್ದಲ್ಲಿ ತಮ್ಮ ಹಕ್ಕನ್ನು ಪ್ರತಿಪಾದಿಸಿ ಈ ನ್ಯಾಯಾಲಯದಿಂದ ಪಡೆದುಕೊಳ್ಳುವುದು. ತಪ್ಪಿದಲ್ಲಿ ವಾರಸುದಾರರು ಯಾರೂ ಇಲ್ಲವೆಂದು ಪರಿಗಣಿಸಿ ಸ್ವತ್ತನ್ನು ಕಾನೂನು ಪ್ರಕಾರ ವಿಲೇವಾರಿ ಮಾಡಲಾಗುವುದು.

| ಮೊಕದ್ದಮೆ ಸಂಖ್ಯೆ | ಪಿ.ಎಫ್. ಸಂಖ್ಯೆ | ಸ್ವತ್ತುಗಳ ವಿವರ |
|---|---|---|
| ಸಿ.ಆರ್:29-00 | ಪಿ.ಎಫ್.18-00 | ಒಂದು ಯಜಡಿ ಮೋಟಾರ್ ಸೈಕಲ್ ನಂ: ಎಂಇವೈ:9717,<br>ಚಾಸೀಸ್ ನಂ: ಐಜೆಡಿ:166143, ಇಂಜಿನ್ ನಂ: ಐಜೆಡಿ-250-005876 |

**ಡಿ.ಟಿ. ದೇವೇಂದ್ರನ್**

ಪಿ.ಆರ್. 1464 ಪ್ರಧಾನ ಸಿವಿಲ್ ನ್ಯಾಯಾಧೀಶರು (ಕಿ.ಶ್ರೇ) ಮತ್ತು ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳವರ ನ್ಯಾಯಾಲಯ, ಶಿಡ್ಲಘಟ್ಟ.

**ಕಂದಾಯ ಇಲಾಖೆ**

**ಸಂಖ್ಯೆ: ಕಂಇ 8 ಭೂದಾಸೇ (1) 2004, ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್ 2004**

**ವಿಷಯ:** ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಭೂದಾಖಲೆಗಳ ಸಹಾಯಕ ನಿರ್ದೇಶಕರು (ಆಡಳಿತ) ಜೇಷ್ಠತಾ ಪಟ್ಟಿಯನ್ನು ದಿನಾಂಕ: 1.1.2004 ರಲ್ಲಿದ್ದಂತೆ ಪ್ರಕಟಿಸುವ ಬಗ್ಗೆ.

**ಉಲ್ಲೇಖ:** 1) ಅಧಿಸೂಚನೆ ಸಂಖ್ಯೆ: ಕಂಇ 208 ಭೂದಾಸೇ (3) 2001, ದಿನಾಂಕ: 9.10.2002.

2) ಅಧಿಸೂಚನೆ ಸಂಖ್ಯೆ: ಕಂಇ 28 ಭೂದಾಸೇ (1) 2004, ದಿನಾಂಕ: 31.7.2004.

ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಭೂದಾಖಲೆಗಳ ಸಹಾಯಕ ನಿರ್ದೇಶಕರು (ಆಡಳಿತ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 1.1.2004 ರಲ್ಲಿದ್ದಂತೆ ಉಲ್ಲೇಖ (2)ರ ದಿನಾಂಕ: 31.7.2004ರ ಅಧಿಸೂಚನೆಯನ್ವಯ ಪ್ರಕಟಪಡಿಸಿ, ಸದರಿ ಜೇಷ್ಠತಾ ಪಟ್ಟಿಯ ಪ್ರಕಟಣೆಯಿಂದ ತೊಂದರೆಗೊಳಗಾಗುವವರು ಅಥವಾ ಪಟ್ಟಿಯಲ್ಲಿನ ನ್ಯೂನತೆಗಳ ಬಗ್ಗೆ ತಮ್ಮ ಆಕ್ಷೇಪಣೆ ಏನಾದರೂ ಇದ್ದಲ್ಲಿ, ಸದರಿ ಅಧಿಸೂಚನೆಯನ್ನು ಹೊರಡಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಕಾರ್ಯದರ್ಶಿಗಳು-2, ಕಂದಾಯ ಇಲಾಖೆ ಇವರಿಗೆ ಸಲ್ಲಿಸುವಂತೆ ಸೂಚಿಸಲಾಗಿತ್ತು.

ನಿಗದಿತ ಅವಧಿಯಲ್ಲಿ ಬಂದಂತಹ ಆಕ್ಷೇಪಣೆಗಳನ್ನು ನಿಯಮಾನುಸಾರ ಪರಿಶೀಲಿಸಿ, ತೀರ್ಮಾನ ತೆಗೆದುಕೊಂಡು ಭೂದಾಖಲೆಗಳ ಸಹಾಯಕ ನಿರ್ದೇಶಕರ ವೃಂದದ (ಆಡಳಿತ) ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ: 1.1.2004 ರಲ್ಲಿದ್ದಂತೆ ಇದಕ್ಕೆ ಲಗತ್ತಿಸಲಾದ ಅನುಬಂಧದಲ್ಲಿರುವಂತೆ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ).

**ಅನುಬಂಧ**

**ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಭೂದಾಖಲೆಗಳ ಸಹಾಯಕ ನಿರ್ದೇಶಕರು (ಆಡಳಿತ) ವೃಂದದ 1.1.2004 ರಲ್ಲಿದ್ದಂತೆ ಅಂತಿಮ ಜೇಷ್ಠತಾ ಪಟ್ಟಿ**

| ಕ್ರ. ಸಂ. | ಅಧಿಕಾರಿಯ ಹೆಸರು | ಹುಟ್ಟಿದ ದಿನಾಂಕ | ಕೆಲಸಕ್ಕೆ ಸೇರಿದ ದಿನಾಂಕ | ಭೂ.ಸ.ನಿ. (ಆಡಳಿತ) ಹುದ್ದೆಗೆ ಮುಂಬಡ್ತಿ ಪಡೆದ ದಿನಾಂಕ | ಹುದ್ದೆಯಲ್ಲಿ ಅರ್ಹತಾ ದಿನಾಂಕ | ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| | **ಶ್ರೀಯುತರು:** | | | | | |
| 1 | ಪರಮೇಶ್ವರಪ್ಪ ಬಿ.ಕೆ. | 20.07.1944 | 11.12.1967 | 20.04.2001 | 26.05.2000 | ನಿವೃತ್ತಿ ಹೊಂದಿರುತ್ತಾರೆ. |
| 2 | ಸ್ವಾಮಿ ಬಿ.ವೈ. | 09.09.1943 | 09.02.1968 | 20.04.2001 | 20.04.2001 | ನಿವೃತ್ತಿ ಹೊಂದಿರುತ್ತಾರೆ. |
| 3 | ಶಂಕರೇಗೌಡ ಜಿ.ಟಿ. | 03.04.1943 | 25.05.1960 | 20.04.2001 | 20.04.2001 | ನಿವೃತ್ತಿ ಹೊಂದಿರುತ್ತಾರೆ. |
| 4 | ಶಿಂಧೆ ಡಿ.ಎಲ್. | 09.04.1954 | 19.12.1978 | 19.05.2001 | 20.04.2001 | ಬಡ್ತಿಯನ್ನು ನಿರಾಕರಿಸಿರುತ್ತಾರೆ ಅದರಂತೆ ಸರ್ಕಾರದ ನಡವಳಿ ದಿನಾಂಕ: 25.5.2001 ರಂದು ರದ್ದು ಪಡಿಸಲಾಗಿದೆ. |

| 1 | 2 | 3 | 4 | 5 | 6 | 7 |
|---|---|---|---|---|---|---|
| 5 | ಚಿನ್ನಯ್ಯ ಸಿ. | 15.05.1943 | 19.08.1961 | 25.05.2001 | 20.04.2001 | ನಿವೃತ್ತಿ ಹೊಂದಿರುತ್ತಾರೆ. |
| 6 | ಅದರಕಟ್ಟೆ ಶ್ರೀಕಾಂತ್ | 04.08.1946 | 18.05.1973 | 19.05.2001 | 19.05.2001 | ಕೆಸಿಎಸ್ಆರ್ ನಿಯಮ 32 ರನ್ವಯ ಕಾರ್ಯನಿರ್ವಹಿಸಿರುತ್ತಾರೆ. |
| 7 | ರವೀಂದ್ರಪ್ಪ ಟಿ. | 20.10.1961 | 13.06.1988 | 23.03.2003 | 19.05.2001 | - |
| 8 | ಜೋಷಿ ಎಸ್.ಜಿ. | 11.08.1946 | 18.05.1973 | 17.12.2002 | 17.12.2002 | - |
| 9 | ಕುಲಕರ್ಣಿ ಕೆ.ಸಿ. | 16.12.1944 | 18.05.1973 | 17.12.2002 | 17.12.2002 | ನಿವೃತ್ತಿ ಹೊಂದಿರುತ್ತಾರೆ |
| 10 | ಯರಗುಡಿ ಎ.ಎ. | 01.06.1947 | 17.05.1973 | 04.03.2003 | 04.03.2003 | - |
| 11 | ಮಹ್ಮದ್ ಉಸ್ಮಾನ್ | 03.02.1948 | 16.05.1973 | 26.03.2003 | 26.03.2003 | - |

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್.1465 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ).

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಸೂಚನೆ ಸಂಖ್ಯೆ: ಎಲ್ಆರ್ಎಫ್/ಸಿಆರ್:26/2003-04, ದಿನಾಂಕ: 7ನೇ ಅಕ್ಟೋಬರ್ 2004

**ವಿಷಯ:** ಸಿಂಗಮ್ಮ ಶ್ರೀನಿವಾಸನ್ ಫೌಂಡೇಷನ್ ರವರು ಬೆಂಗಳೂರು ಉತ್ತರ ತಾಲ್ಲೂಕು, ಕಸಬಾ ಹೋಬಳಿ, ರಾಜ್‌ಮಹಲ್ ಗ್ರಾಮದ ಸ.ನಂ.5/1 ಎಫ್ ರಲ್ಲಿ 5-27 ಎಕರೆ/ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನವಾಗಿ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಸಿಂಗಮ್ಮ ಶ್ರೀನಿವಾಸನ್ ಫೌಂಡೇಷನ್, ಬೆಂಗಳೂರು ರವರು ಬೆಂಗಳೂರು ಉತ್ತರ ತಾಲ್ಲೂಕು, ಕಸಬಾ ಹೋಬಳಿ, ರಾಜ್‌ಮಹಲ್ ಗ್ರಾಮದ ಸ.ನಂ.5/1 ಎಫ್ ರಲ್ಲಿ 5-27 ಎಕರೆ/ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿರುವ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್ಆರ್ಎಫ್:ಸಿಆರ್:45/04-05, ದಿನಾಂಕ: 16.9.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 5/1 ಎಫ್ ರಲ್ಲಿ 5-27 ಎಕರೆ/ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1) (11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಸು.ಟ್ರಸ್ಟ್/718/104/volB.11/ಎಸ್.21384.85, ದಿನಾಂಕ: 28.3.1984 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ದಾನವಾಗಿ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಮತ್ತು ಚಾರಿಟೇಬಲ್ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ ತಾಲ್ಲೂಕು, ಕಸಬಾ ಹೋಬಳಿ, ರಾಜ್‌ಮಹಲ್ ಗ್ರಾಮದ ಸರ್ವೆ ನಂ.5/1ಎಫ್ ರಲ್ಲಿ 5-27 ಎಕರೆ/ಗುಂಟೆ ಜಮೀನನ್ನು ಸಿಂಗಮ್ಮ ಶ್ರೀನಿವಾಸನ್ ಫೌಂಡೇಷನ್, ಬೆಂಗಳೂರು ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಶಾಇ 47 ಶಾಸನ 2001, ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ, ಶೇ.55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3) ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ವಿದ್ಯಾ ಸಂಸ್ಥೆಗಳಿಗೆ ಉಪಯೋಗಿಸಿಕೊಳ್ಳಲು ಭೂ ಬದಲಾವಣೆಯ ಅವಶ್ಯಕತೆ ಇದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.

7) ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1466 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

**ಅಧಿಕೃತ ಜ್ಞಾಪನ ಸಂಖ್ಯೆ: ಎಲ್‌ಆರ್‌ಎಫ್/ಸಿಆರ್:151/2003-04, ದಿನಾಂಕ: 29ನೇ ಸೆಪ್ಟೆಂಬರ್ 2004**

**ವಿಷಯ:** ದಿ ಸೊಸೈಟಿ ಆಫ್ ದಿ ದಿವೈನ್ ಸಾವಿಯರ್ (ಎಸ್‌ಡಿಎಸ್) ರವರು ಬೆಂಗಳೂರು ಪೂರ್ವ ತಾಲ್ಲೂಕು ವರ್ತೂರು ಹೋಬಳಿ ಗುಂಜೂರು ಗ್ರಾಮದ ಸ.ನಂ.93/1, 96 ರಲ್ಲಿ 3-12 ಮತ್ತು 7-20 ಒಟ್ಟು 10-32 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ದಿ ಸೊಸೈಟಿ ಆಫ್ ದಿ ದಿವೈನ್ ಸಾವಿಯರ್ (ಎಸ್‌ಡಿಎಸ್) ರವರು ಬೆಂಗಳೂರು ಪೂರ್ವ ತಾಲ್ಲೂಕು ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ.93/1, 96 ರಲ್ಲಿ 3-12 ಮತ್ತು 7-20 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ಮಾಡಿರುವ ಬೇಡಿಕೆ ಹಾಗೂ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ 15ಎ ಮತ್ತು ನಮೂನೆ 15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್‌ಆರ್‌ಎಫ್:109:ಸಿಆರ್:5/03-04, ದಿನಾಂಕ: 25.9.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸರ್ವೆ ನಂ.93/1, 96 ರಲ್ಲಿ 3-12 ಮತ್ತು 7-20 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1) (11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪನೋಂದಣಾಧಿಕಾರಿಗಳ ಕಛೇರಿ ಕೆ.ಆರ್. ಪುರ ಉಪನೋಂದಣಾ ಕಛೇರಿಯಲ್ಲಿ ದಿನಾಂಕ: 24.8.1989 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಒಪ್ಪಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಭೂ ಮಂಜೂರಾತಿ ನಿಯಮಾವಳಿಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

### ಆದೇಶ

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳಿದ್ದು ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1995ರ ಪ್ರಕಾರ ಕಲಂ 109(1)(11) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ.93/1, 96 ರಲ್ಲಿ 3-12 ಮತ್ತು 7-20 ಒಟ್ಟು 10-32 ಎಕರೆ:ಗುಂಟೆ ಜಮೀನನ್ನು ದಿ ವೈನ್ ಸಾವಿಯರ್ ಸೊಸೈಟಿ, ಬೆಂಗಳೂರು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಶಾಇ 47 ಶಾಸನ 2001, ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

### ಷರತ್ತುಗಳು

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ಲಿಖಿತ ಮಾಹಿತಿಯನ್ನು ತಹಶೀಲ್ದಾರ್ ರವರ ಮುಖಾಂತರ ಈ ಕಛೇರಿಗೆ ನೀಡತಕ್ಕದ್ದು.
2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1956 ಕಲಂ 38 ರಲ್ಲಿ ಹೇಳಿರುವಂತೆ, ಶೇ.55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾವಣೆ ಮಾಡಬಾರದು.
3) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
4) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
6) ಈ ಅನುಮತಿಯು ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾಯ್ದೆಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಗಳಡಿ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1467 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ.

## ಸಮಾಜ ಕಲ್ಯಾಣ ಇಲಾಖೆ

## ಜಿಲ್ಲಾ ಪಂಚಾಯತ್, ಬಳ್ಳಾರಿ

## ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ

**ಪ್ರಕಟಣೆ ಸಂಖ್ಯೆ: ಜಿಸಕಅ/ಎಸ್-6/ಸಿಆರ್-/2004-05, ದಿನಾಂಕ: 26ನೇ ಜುಲೈ 2004**

**ವಿಷಯ:** 2004-05ನೇ ಸಾಲಿನಲ್ಲಿ ಪ.ಜಾತಿ:ಪ.ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧಿಕರಣದಲ್ಲಿ ತರಬೇತಿ ನೀಡಲು ಅರ್ಜಿಗಳನ್ನು ಆಹ್ವಾನಿಸುವುದರ ಕುರಿತು.

**ಉಲ್ಲೇಖ** 1) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಸ್-681/ಎಸ್‌ಡಬ್ಲ್ಯೂ-89/ಬೆಂಗಳೂರು, ದಿನಾಂಕ: 2.11.90.

2) ಸರ್ಕಾರದ ಆದೇಶ ಸಂಖ್ಯೆ: ಸಕಇ-421/ಪಕವಿ-95/ಬೆಂಗಳೂರು, ದಿನಾಂಕ: 29.07.97.

3) ಆಯುಕ್ತರು, ಸ.ಕ.ಇ. ಬೆಂಗಳೂರು ಇವರ ಪ.ಸಂ.ಸಕ.ಇ/ಸಮನ್ವಯ-6/ಸಿಆರ್-14/97-98, ದಿನಾಂಕ: 07.08.97 ಮತ್ತು 14.10.97.

4) ಸರ್ಕಾರದ ಆದೇಶ ಸಂಖ್ಯೆ: ಸಕಇ-535/ಸಕವಿ-2000, ಬೆಂಗಳೂರು, ದಿನಾಂಕ: 28.03.2001.

ಬಳ್ಳಾರಿ ಜಿಲ್ಲೆಯಲ್ಲಿರುವ ಪ.ಜಾತಿ:ಪ.ವರ್ಗಕ್ಕೆ ಸೇರಿರುವ ಕಾನೂನು ಪದವೀಧರರಿಗೆ 2004-05ನೇ ಸಾಲಿಗೆ ಆಡಳಿತ ನ್ಯಾಯಾಧಿಕರಣದಲ್ಲಿ 4 ವರ್ಷಗಳ ತರಬೇತಿಯನ್ನು ನೀಡುವ ಸಲುವಾಗಿ ಅರ್ಹ ಪ.ಜಾತಿ:ಪ.ವರ್ಗದ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಈ ತರಬೇತಿಯನ್ನು ಪಡೆಯಲು ಇಚ್ಛಿಸುವ ಪ.ಜಾತಿ:ಪ.ವರ್ಗದ ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಯನ್ನು ಕಡ್ಡಾಯವಾಗಿ ಹೊಂದಿರತಕ್ಕದ್ದು.

1) ಅಭ್ಯರ್ಥಿಗಳು ಪ.ಜಾತಿ:ಪ.ವರ್ಗಕ್ಕೆ ಸೇರಿದವರಾಗಿರಬೇಕು.
2) ಬಳ್ಳಾರಿ ಜಿಲ್ಲೆಗೆ ಮಾತ್ರ ಸಂಬಂಧಿಸಿದ ಹಾಗೂ ವಕೀಲ ವೃತ್ತಿ ನಡೆಸಲು ಅರ್ಹತೆಯುಳ್ಳ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರು.
3) ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ 2 ವರ್ಷದೊಳಗೆ ಕಾನೂನು ಪದವಿಯನ್ನು ಪಡೆದವರು ಮಾತ್ರ ಈ ತರಬೇತಿಗೆ ಅರ್ಹರು (ಅರ್ಜಿಯೊಂದಿಗೆ) ಕಾನೂನು ಪದವಿಯ 3 ವರ್ಷದ ಅಂಕಪಟ್ಟಿಗಳ ಝರಾಕ್ಸ್ ಪ್ರತಿಗಳನ್ನು ಸಲ್ಲಿಸತಕ್ಕದ್ದು.
4) ಈ ತರಬೇತಿಗೆ 5 ಪ.ಜಾತಿ:ಪ.ವರ್ಗದ ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುವುದು. ಅದರಲ್ಲಿ ಒಂದು ಸ್ಥಾನವನ್ನು ಮಹಿಳಾ ಅಭ್ಯರ್ಥಿಗೆ ಮೀಸಲಿಡಲಾಗುವುದು.
5) ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ನ್ಯಾಯಾಂಗ ಆಡಳಿತ ತರಬೇತಿಯನ್ನು ಸರ್ಕಾರಿ ವಕೀಲರು, ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ 20 ವರ್ಷಗಳ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ನೀಡಲಾಗುವುದು. ಈ ವಿಷಯದ ಬಗ್ಗೆ ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾದದ್ದು.
6) ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾಹೆಯಾನ ರೂ1,000/- (ರೂ.ಒಂದು ಸಾವಿರ ಮಾತ್ರ) ಸ್ಟೈಫಂಡ್ ನೀಡಲಾಗುವುದು.
7) ಈ ತರಬೇತಿಗೆ ಅಭ್ಯರ್ಥಿಗಳನ್ನು ಮಾನ್ಯ ಜಿಲ್ಲಾಧಿಕಾರಿಗಳು, ಬಳ್ಳಾರಿ ಇವರ ಅಧ್ಯಕ್ಷತೆಯಲ್ಲಿ ರಚಿತವಾದ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.
8) ಅಭ್ಯರ್ಥಿಯ ವಯಸ್ಸು, ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕದಂದು 35 ವರ್ಷಗಳನ್ನು ಮೀರಿರಬಾರದು. ಈ ಕುರಿತು ಅಧಿಕೃತ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ.) ಅಂಕಪಟ್ಟಿ ಪ್ರತಿ ಲಗತ್ತಿಸಬೇಕು.
9) ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯದಲ್ಲಿ ಬಿಟ್ಟುಹೋಗಬಾರದು (ಕೇಂದ್ರ/ರಾಜ್ಯ ಸರ್ಕಾರದಲ್ಲಿ ಉದ್ಯೋಗ ದೊರೆತ ಅಭ್ಯರ್ಥಿಗಳಿಗೆ ಈ ನಿಬಂಧನೆ ಅನ್ವಯಿಸುವುದಿಲ್ಲ)
10) ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಮಾಹಿತಿ ದಾಖಲೆ ಒದಗಿಸಿದ್ದಲ್ಲಿ, ಅಂತಹವರನ್ನು ಕಾನೂನಿನ ಶಿಸ್ತಿನ ಕ್ರಮಕ್ಕೆ ಒಳಪಡಿಸಲಾಗುವುದು. ಹಾಗೂ ತರಬೇತಿಯನ್ನು ಮಧ್ಯದಲ್ಲಿ ಬಿಟ್ಟುಹೋದಲ್ಲಿ, ಅಂತಹವರಿಗೆ ನೀಡಿದ ಸ್ಟೈಫಂಡ್ ಹಣವನ್ನು ಶೇ.10 ರಷ್ಟು ಬಡ್ಡಿ ಸೇರಿಸಿ, ಭೂ ಕಂದಾಯ ಬಾಕಿ ಎಂದು ಪರಿಗಣಿಸಿ, ವಸೂಲಿ ಮಾಡಲಾಗುವುದು. ಈ ಬಗ್ಗೆ ಆಯ್ಕೆಯಾದ ಅಭ್ಯರ್ಥಿಗಳು ಕರಾರು ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಬರೆದುಕೊಡತಕ್ಕದ್ದು.
11) ಈ ತರಬೇತಿಗೆ ಅರ್ಜಿಯನ್ನು ಸಲ್ಲಿಸಲು ಇಚ್ಛಿಸುವ ಅಭ್ಯರ್ಥಿಗಳು ಅರ್ಜಿಗಳನ್ನು ದ್ವಿಪ್ರತಿಗಳಲ್ಲಿ ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಎಲ್ಲಾ ಪರೀಕ್ಷೆಗಳ ಅಂಕಪಟ್ಟಿಗಳ ಝರಾಕ್ಸ್ ಮತ್ತು ಜಾತಿ ಪ್ರಮಾಣ ಪತ್ರ ಬಾರ್ ಕೌನ್ಸಿಲ್‌ನಲ್ಲಿ ನೋಂದಣಿ ಮಾಡಿದ ಪ್ರಮಾಣ ಪತ್ರದ ಪ್ರತಿಗಳೊಂದಿಗೆ ಸಲ್ಲಿಸಬೇಕು.
12) ಸಂದರ್ಶನದಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾತ್ರ ಈ ಕಛೇರಿಯಿಂದ ತಿಳಿಸಲಾಗುವುದು. ಹಾಗೂ ತರಬೇತಿ ಪಡೆಯಲು ಆಯ್ಕೆಯಾದ ಅಭ್ಯರ್ಥಿಗಳು ಆಯ್ಕೆ ಪತ್ರ ತಲುಪಿದ 15 ದಿನಗಳೊಳಗಾಗಿ ತಮ್ಮ ಒಪ್ಪಿಗೆ ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಸಲ್ಲಿಸತಕ್ಕದ್ದು.
13) ಪೂರ್ಣ ಭರ್ತಿ ಮಾಡಿದ ಅರ್ಜಿಗಳನ್ನು (ದ್ವಿ ಪ್ರತಿಗಳಲ್ಲಿ) ಕಾರ್ಯದರ್ಶಿಗಳು, ಜಿಲ್ಲಾ ಮಟ್ಟದ ನ್ಯಾಯಾಂಗ ತರಬೇತಿ ಆಯ್ಕೆ ಸಮಿತಿ ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ದಿನಾಂಕ: **20.09.2004ರ ಸಾಯಂಕಾಲ 5.30 ಗಂಟೆಯೊಳಗೆ** ತಲುಪುವಂತೆ ಸಲ್ಲಿಸತಕ್ಕದ್ದು.
14) ಅಪೂರ್ಣ ಮಾಹಿತಿ ಸಲ್ಲಿಸಿದ ಹಾಗೂ ಅನರ್ಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಹಕ್ಕು ಆಯ್ಕೆ ಸಮಿತಿಗೆ ಇರುತ್ತದೆ.
15) ಈಗಾಗಲೇ ಕಾನೂನು ವಿಷಯದಲ್ಲಿ ಯಾವುದಾದರೂ ತರಬೇತಿ ಪಡೆಯುತ್ತಿದ್ದರೆ, ಅಂತಹ ಅಭ್ಯರ್ಥಿಗಳು ಅರ್ಹರಿರುವುದಿಲ್ಲ.
16) ಅರ್ಜಿಗಳನ್ನು ಮತ್ತು ಹೆಚ್ಚಿನ ಮಾಹಿತಿಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ ಹಾಗೂ ಸಂಬಂಧಪಟ್ಟ ತಾಲ್ಲೂಕು ಸಮಾಜ ಕಲ್ಯಾಣಾದಿಕಾರಿಗಳ ಕಛೇರಿಯಿಂದ ಪಡೆಯತಕ್ಕದ್ದು.

**ಹನುಮಂತು**

ಪಿ.ಆರ್. 1468

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಹಾಗೂ ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತ ತರಬೇತಿ ಆಯ್ಕೆ ಸಮಿತಿ, ಬಳ್ಳಾರಿ.

## ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರ ನಡವಳಿಕೆಗಳು

**ಉಪಸ್ಥಿತರು:** ಶ್ರೀ ಆರ್.ಡಿ. ಆಲ್ಮೇಡ ನೋಂದಣಿ ಪ್ರಾಧಿಕಾರಿ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ.

**ವಿಷಯ:** ಮೋಟಾರು ವಾಹನ ಸಂಖ್ಯೆ: ಎಂವೈಎಸ್ 8447 ನೋಂದಣಿ ಮತ್ತು ನೋಂದಣಿ ಪತ್ರವನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ವಾಹನ ಮಾಲೀಕರ ಅರ್ಜಿ ದಿನಾಂಕ: 21.9.2004.

2) ವಾಹನ ನಿರೀಕ್ಷಕರ ವರದಿ ದಿನಾಂಕ: 27.9.2004.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಹಾಗೂ ಉಲ್ಲೇಖದಂತೆ ವಾಹನ ಸಂಖ್ಯೆ: ಎಂವೈಎಸ್ 8447 ಮಾಲೀಕರಾದ ಶ್ರೀ ಸ್ವರಣಸಿಂಗ್ ಬೂಮ್ರ ಬಿನ್ ಭಾತಂಸಿಂಗ್, ಡೆಪ್ಯೂಟಿ ಚೀಫ್ ಇಂಜಿನಿಯರ್, ತುಂಗಭದ್ರಾ ಶುಗರ್ ವರ್ಕ್ಸ್, ಪಿ.ಬಿ.ನಂ:2, ಶಿವಮೊಗ್ಗ ಇವರು ದಿನಾಂಕ: 21.9.2004 ರಂದು ವಾಹನ ನೋಂದಣಿ ರದ್ದುಪಡಿಸಲು ಮನವಿ ಮಾಡಿದ್ದಾರೆ ಹಾಗೂ ಅವಧಿ ಜೀವಾವಧಿವರೆಗೆ ಶುಲ್ಕವನ್ನು ಪಾವತಿಸಿದ್ದು ಮತ್ತು ವಾಹನ ನಿರೀಕ್ಷಕರು ದಿನಾಂಕ: 27.9.2004 ರಂದು ವಾಹನದ ಸ್ಥಿತಿಗತಿಯ ಬಗ್ಗೆ ವರದಿಯನ್ನು ಸಲ್ಲಿಸಿ, ವಾಹನದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸು ಮಾಡಿದ್ದಾರೆ.

ಆದ್ದರಿಂದ ಈ ಮೇಲೆ ವಿವರಿಸಿರುವ ಅಂಶವನ್ನು ಪರಿಶೀಲಿಸಿ, ಸದರಿ ವಾಹನದ ನೋಂದಣಿಯನ್ನು ರದ್ದುಪಡಿಸುವ ಸಲುವಾಗಿ ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಪ್ರಾಸಾಅ:ಶಿ:ಎಸ್‌ಆರ್:ಬಿಆರ್-11434/2004, ದಿನಾಂಕ: 6ನೇ ಅಕ್ಟೋಬರ್ 2004**

ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಆದ ನಾನು ನನಗೆ ಪ್ರದತ್ತವಾದ ಅಧಿಕಾರದ ಮೇರೆಗೆ ಮೋಟಾರು ವಾಹನ ಸಂಖ್ಯೆ: ಎಂವೈಎಸ್ 8447 ವಾಹನದ ಮೇಲೆ ಏನಾದರೂ ತೆರಿಗೆ ಬಾಕಿ ತನಿಖಾ ಆಕ್ಷೇಪಣೆಗಳು ಇರುವುದು ಕಂಡುಬಂದಲ್ಲಿ ಸದರಿ ವಾಹನದ ಮಾಲೀಕರೇ ಪಾವತಿಸಬೇಕೆಂದು ಷರತ್ತಿನೊಂದಿಗೆ ನೋಂದಣಿಯನ್ನು ಮೋಟಾರು ವಾಹನ ಕಾಯ್ದೆ 1988ರ ವಿಧಿ 55(2)ರ ಪ್ರಕಾರ ರದ್ದುಪಡಿಸಿರುತ್ತೇನೆ.

**ವಾಹನ ವಿವರಗಳು**

| | | |
|---|---|---|
| 1) | ವಾಹನದ ಸಂಖ್ಯೆ | ಎಂವೈಎಸ್-8447 |
| 2) | ನೋಂದಣಿ ದಿನಾಂಕ: | 5.5.1972 |
| 3) | ವಾಹನದ ವರ್ಗ | ಮೋಟಾರು ಸೈಕಲ್ |
| 4) | ತಯಾರಕರ ಹೆಸರು | ಬಜಾಜ್ |
| 5) | ಅಡಿಗಚ್ಚು ಸಂಖ್ಯೆ | 03ಸಿ 204 042 842 |
| 6) | ಯಂತ್ರದ ಸಂಖ್ಯೆ | 03ಇ 204 042 502 |
| 7) | ಮಾಲೀಕರು | ಶ್ರೀ ಸ್ವರಣಸಿಂಗ್ ಬೂಮ್ರ ಬಿನ್ ಭಾತಂಸಿಂಗ್, ಡೆಪ್ಯೂಟಿ ಚೀಫ್ ಇಂಜಿನಿಯರ್, ತುಂಗಭದ್ರಾ ಶುಗರ್ ವರ್ಕ್ಸ್ ಪಿ.ಬಿ.ಸಂಖ್ಯೆ:2, ಶಿವಮೊಗ್ಗ. |

ಪಿ.ಆರ್. 1469 ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ.

**ಕಂದಾಯ ಇಲಾಖೆ**

**ಅಧಿಸೂಚನೆ ಸಂಖ್ಯೆ: ಕಂಇ 76 ಎಲ್‌ಆರ್‌ಎಂ 2004, ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್ 2004**

ಮೆ: ಎಜುಕೇಟ್ ಇಂಡಿಯಾ ಫೌಂಡೇಶನ್, ಬೆಂಗಳೂರು ಇವರು ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಚಿಕ್ಕವಡೇರಪುರ ಗ್ರಾಮದ ಸರ್ವೆ ನಂಬರುಗಳು: 1 ರಲ್ಲಿ 1-20 ಎಕರೆ, 2 ರಲ್ಲಿ 0-30 ಎಕರೆ, 3 ರಲ್ಲಿ 1-20 ಎಕರೆ, 45 ರಲ್ಲಿ 4-10 ಎಕರೆ, 46 ರಲ್ಲಿ 4-06 ಎಕರೆ, 47 ರಲ್ಲಿ 3-05 ಎಕರೆ, 48 ರಲ್ಲಿ 3-00 ಎಕರೆ ಮತ್ತು 60 ರಲ್ಲಿ 1-00 ಎಕರೆ ಒಟ್ಟು: 19.11 ಎಕರೆ ಜಮೀನನ್ನು (ಸ.ನಂ. 62 ರಲ್ಲಿ 2-00 ಎಕರೆ ಜಮೀನಿನ ಬಗ್ಗೆ ಪ್ರಕರಣವು ನ್ಯಾಯಾಲಯದಲ್ಲಿ ಬಾಕಿ ಇರುವುದರಿಂದ ಇದನ್ನು ಹೊರತುಪಡಿಸಿ) ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಎಲ್‌ಆರ್‌ಎಫ್/ಸಿಆರ್/18/2004-05, ದಿನಾಂಕ: 6.8.2004, 26.8.2004 ಮತ್ತು 10.9.2004ರ ಪತ್ರಗಳಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸರ್ವೆ ನಂಬರುಗಳಲ್ಲಿ ಒಟ್ಟು: 19.11 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109(1) (ii)ರ ಅಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಸಂಸ್ಥೆಯು ಹಿರಿಯ ಉಪ ನೋಂದಣಾಧಿಕಾರಿಗಳು, ಶಿವಾಜಿನಗರ, ಬೆಂಗಳೂರು ಇವರಲ್ಲಿ ದಿನಾಂಕ: 17.5.2004 ರಂದು ನೋಂದಾಯಿಸಲ್ಪಟ್ಟಿದೆ. ಪ್ರಸ್ತಾಪಿತ ಜಮೀನನ್ನು ಖಾತೆದಾರರಿಂದ ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ, 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1) (ii)ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ವರೆಗೆ ಜಮೀನಿಗೆ ಸರ್ಕಾರವು ಸದರಿ ಅಧಿನಿಯಮದ ಸೆಕ್ಷನ್ 63, 79ಎ, 79ಬಿ ಅಥವಾ 80 ರಿಂದ ವಿನಾಯಿತಿ ನೀಡಲು ಅವಕಾಶ ಕಲ್ಪಿಸಲಾಗಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ, 1995ರ ಕಲಂ 109(1) (ii) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38-ಬಿ (2) (ಎ) ಮತ್ತು (ಬಿ) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 63, 79ಎ, 79ಬಿ ಅಥವಾ 80 ರಿಂದ ವಿನಾಯ್ತಿ ನೀಡಿ ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಚಿಕ್ಕವಡೇರಪುರ ಗ್ರಾಮದ ಸರ್ವೆ ನಂಬರುಗಳು:1 ರಲ್ಲಿ 1-20 ಎಕರೆ, 2 ರಲ್ಲಿ 0-30 ಎಕರೆ, 3 ರಲ್ಲಿ 1-20 ಎಕರೆ, 45 ರಲ್ಲಿ 4-10 ಎಕರೆ, 46 ರಲ್ಲಿ 4-06 ಎಕರೆ, 47 ರಲ್ಲಿ 3-05 ಎಕರೆ, 48 ರಲ್ಲಿ 3-00 ಎಕರೆ ಮತ್ತು 60 ರಲ್ಲಿ 1-00 ಎಕರೆ ಒಟ್ಟು: 19.11 ಎಕರೆ ಜಮೀನನ್ನು ಮೇ: ಎಜುಕೇಟ್ ಇಂಡಿಯಾ ಫೌಂಡೇಶನ್, ಬೆಂಗಳೂರು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109 (1) (ii)ರ ಅಡಿ ವಿನಾಯ್ತಿ ನೀಡಿ, ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:

**ಷರತ್ತುಗಳು**

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1956 ಕಲಂ 3 ರಲ್ಲಿ ಹೇಳಿರುವಂತೆ, ಶೇ.55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

4) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ / ಒಡಿಪಿ ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.

5) ಸಂಸ್ಥೆಯು ಸ್ಥಾಪಿಸಲು ಉದ್ದೇಶಿಸಿರುವ ಶಿಕ್ಷಣ ಸಂಸ್ಥೆಯು ಮಕ್ಕಳಿಗೆ ಮತ್ತು ವಿದ್ಯಾರ್ಥಿಗಳಿಗೆ ಇರುವುದರಿಂದ ಮತ್ತು ಅಧಿಕ ಪ್ರಸಾರದ ವಿದ್ಯುತ್ ತಂತಿ, ಇವರು ಕೊಳ್ಳಲಿರುವ ಭೂಮಿಯ ಪಕ್ಕದಲ್ಲೇ ಇರುವುದರಿಂದ ಮಕ್ಕಳು ಮತ್ತು ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಶಿಕ್ಷಣ ಸಂಸ್ಥೆ ಆರಂಭಿಸುವ ಮುನ್ನ ಆರ್ಜಿತ ಸಂಸ್ಥೆಯು ಕೆ.ಇ.ಬಿ. / ಕೆ.ಪಿ.ಟಿ.ಸಿ.ಎಲ್. ಅವರಿಂದ ಪೂರ್ವಾನುಮತಿ ಪಡೆಯತಕ್ಕದ್ದು. ಈ ರೀತಿ ಸಂಸ್ಥೆಯು ಪೂರ್ವಾನುಮತಿ ಪಡೆದಿರುವ ಬಗ್ಗೆ ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಇವರು ಖಾತರಿಪಡಿಸಿಕೊಳ್ಳತಕ್ಕದ್ದು.

6) ಶಿಕ್ಷಣ ಸಂಸ್ಥೆ ಆರಂಭಿಸುವ ಮುನ್ನ ಶಿಕ್ಷಣ ಇಲಾಖೆಯ ಅನುಮತಿಯನ್ನೂ ಸಹ ಪಡೆಯತಕ್ಕದ್ದು.

7) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಗುವುದು.

8) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯ್ತಿ ನೀಡಲು ಶಿಫಾರಸ್ಸು ಮಾತ್ರವಾಗಿರುತ್ತದೆ. ಇತರೆ ಯಾವುದೇ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1470

**ಕೆ.ವಿ. ಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ).

## ಕಂದಾಯ ಇಲಾಖೆ

### ಅಧಿಸೂಚನೆ ಸಂಖ್ಯೆ: ಕಂಇ 70 ಎಲ್‌ಆರ್‌ಎಂ 2004, ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್ 2004

ಮೆ: ಎಜುಕೇಟ್ ಇಂಡಿಯಾ ಟ್ರಸ್ಟ್, ಬೆಂಗಳೂರು ಇವರು ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಚಿಕ್ಕವಡೇರಪುರ ಗ್ರಾಮದ ಸರ್ವೆ ನಂಬರುಗಳು 45 ರಲ್ಲಿ 1-00 ಎಕರೆ, 47 ರಲ್ಲಿ 2-13 ಎಕರೆ, 48 ರಲ್ಲಿ 2-00 ಎಕರೆ, 52 ರಲ್ಲಿ 2-00 ಎಕರೆ, 55 ರಲ್ಲಿ 2-00 ಎಕರೆ, 56 ರಲ್ಲಿ 5-12 ಎಕರೆ, 57/4 ರಲ್ಲಿ 1-32 ಎಕರೆ, 58/1 ರಲ್ಲಿ 1-02 ಎಕರೆ, 58/2 ರಲ್ಲಿ 1-08 ಎಕರೆ ಮತ್ತು 57/2 ರಲ್ಲಿ 0-18 ಎಕರೆ ಒಟ್ಟು: 19.05 ಎಕರೆ ಜಮೀನನ್ನು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಎಲ್‌ಆರ್‌ಎಫ್/ಸಿಆರ್/39/2004-05, ದಿನಾಂಕ: 6.8.2004, 26.8.2004 ಮತ್ತು 10.9.2004ರ ಪತ್ರಗಳಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸರ್ವೆ ನಂಬರುಗಳಲ್ಲಿ ಒಟ್ಟು: 19.05 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109(1) (ii)ರ ಅಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಸಂಸ್ಥೆಯು ಹಿರಿಯ ಉಪ ನೋಂದಣಾಧಿಕಾರಿಗಳು, ಶಿವಾಜಿನಗರ, ಬೆಂಗಳೂರು ಇವರಲ್ಲಿ ದಿನಾಂಕ: 24.3.2004 ರಂದು ನೋಂದಾಯಿಸಲ್ಪಟ್ಟಿದೆ. ಪ್ರಸ್ತಾಪಿತ ಜಮೀನನ್ನು ಖಾತೆದಾರರಿಂದ ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ, 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1) (ii)ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ವರೆಗೆ ಜಮೀನಿಗೆ ಸರ್ಕಾರವು ಸದರಿ ಅಧಿನಿಯಮದ ಸೆಕ್ಷನ್ 63, 79ಎ, 79ಬಿ ಅಥವಾ 80 ರಿಂದ ವಿನಾಯಿತಿ ನೀಡಲು ಅವಕಾಶ ಕಲ್ಪಿಸಲಾಗಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ, 1995ರ ಕಲಂ 109(1) (ii) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38-ಬಿ (2) (ಎ) ಮತ್ತು (ಬಿ) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 63, 79ಎ, 79ಬಿ ಅಥವಾ 80 ರಿಂದ ವಿನಾಯ್ತಿ ನೀಡಿ ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಚಿಕ್ಕವಡೇರಪುರ ಗ್ರಾಮದ ಸರ್ವೆ ನಂಬರುಗಳು 45 ರಲ್ಲಿ 1-00 ಎಕರೆ, 47 ರಲ್ಲಿ 2-13 ಎಕರೆ, 48 ರಲ್ಲಿ 2-00 ಎಕರೆ, 52 ರಲ್ಲಿ 2-00 ಎಕರೆ, 55 ರಲ್ಲಿ 2-00 ಎಕರೆ, 56 ರಲ್ಲಿ 5-12 ಎಕರೆ, 57/4 ರಲ್ಲಿ 1-32 ಎಕರೆ, 58/1 ರಲ್ಲಿ 1-02 ಎಕರೆ, 58/2 ರಲ್ಲಿ 1-08 ಎಕರೆ ಮತ್ತು 57/2 ರಲ್ಲಿ 0-18 ಎಕರೆ ಒಟ್ಟು: 19.05 ಎಕರೆ ಜಮೀನನ್ನು ಮೇ: ಎಜುಕೇಟ್ ಇಂಡಿಯಾ ಟ್ರಸ್ಟ್, ಬೆಂಗಳೂರು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109 (1) (ii)ರ ಅಡಿ ವಿನಾಯ್ತಿ ನೀಡಿ, ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:

#### ಷರತ್ತುಗಳು

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1956 ಕಲಂ 3 ರಲ್ಲಿ ಹೇಳಿರುವಂತೆ, ಶೇ.55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

4) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ / ಒಡಿಪಿ ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.

5) ಸಂಸ್ಥೆಯು ಸ್ಥಾಪಿಸಲು ಉದ್ದೇಶಿಸಿರುವ ಶಿಕ್ಷಣ ಸಂಸ್ಥೆಯು ಮಕ್ಕಳಿಗೆ ಮತ್ತು ವಿದ್ಯಾರ್ಥಿಗಳಿಗೆ ಇರುವುದರಿಂದ ಮತ್ತು ಅಧಿಕ ಪ್ರಸಾರದ ವಿದ್ಯುತ್ ತಂತಿ, ಇವರು ಕೊಳ್ಳಲಿರುವ ಭೂಮಿಯ ಪಕ್ಕದಲ್ಲೇ ಇರುವುದರಿಂದ ಮಕ್ಕಳು ಮತ್ತು ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಶಿಕ್ಷಣ ಸಂಸ್ಥೆ ಆರಂಭಿಸುವ ಮುನ್ನ ಆರ್ಜಿತ ಸಂಸ್ಥೆಯು ಕೆ.ಇ.ಬಿ. / ಕೆ.ಪಿ.ಟಿ.ಸಿ.ಎಲ್. ಅವರಿಂದ ಪೂರ್ವಾನುಮತಿ ಪಡೆಯತಕ್ಕದ್ದು. ಈ ರೀತಿ ಸಂಸ್ಥೆಯು ಪೂರ್ವಾನುಮತಿ ಪಡೆದಿರುವ ಬಗ್ಗೆ ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಇವರು ಖಾತರಿಪಡಿಸಿಕೊಳ್ಳತಕ್ಕದ್ದು.

6) ಶಿಕ್ಷಣ ಸಂಸ್ಥೆ ಆರಂಭಿಸುವ ಮುನ್ನ ಶಿಕ್ಷಣ ಇಲಾಖೆಯ ಅನುಮತಿಯನ್ನೂ ಸಹ ಪಡೆಯತಕ್ಕದ್ದು.

7) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಗುವುದು.

8) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯ್ತಿ ನೀಡಲು ಮಾತ್ರವಾಗಿರುತ್ತದೆ. ಇತರೆ ಯಾವುದೇ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1471

**ಕೆ.ವಿ. ಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ).

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ ಸಂಖ್ಯೆ: 41/ಸಂವಿ/ಸಿ.ಓ.ಪಿ/2004, ದಿನಾಂಕ: 11ನೇ ಅಕ್ಟೋಬರ್ 2004**

ಬೆಂಗಳೂರು ನಗರ, ಫ್ರೇಜರ್‌ಟೌನ್ ಸಂಚಾರ ವಲಯ ವ್ಯಾಪ್ತಿಯಲ್ಲಿ ಬರುವ ಹೆಣ್ಣೂರು ಮುಖ್ಯ ರಸ್ತೆ, ಲಾಜರ್ ರಸ್ತೆ, ಎಂ.ಎಂ. ರಸ್ತೆಗಳಲ್ಲಿ ವಾಹನ ಸಂಚಾರ ಅಧಿಕಗೊಂಡು ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಮತ್ತು ವಾಹನ ಸಂಚಾರದಲ್ಲಿ ನಿಧಾನಗತಿ ಉಂಟಾಗಿರುವುದು ಹಾಗೂ ಹೆಚ್ಚಿನ ಅಪಘಾತಗಳು ಸಂಭವಿಸುತ್ತಿರುವುದು ಕಂಡು ಬಂದಿರುತ್ತದೆ. ಸಾರ್ವಜನಿಕ ಹಿತಾಸಕ್ತಿ ಗಮನಿಸಿ ಈ ರಸ್ತೆಗಳಲ್ಲಿ ವಾಹನ ದಟ್ಟಣೆಯನ್ನು ತಗ್ಗಿಸಲು ಹಾಗೂ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವ ಹಾಗೂ ಅಪಘಾತಗಳನ್ನು ತಪ್ಪಿಸುವ ಸಲುವಾಗಿ ಏಕಮುಖ ಸಂಚಾರ ವ್ಯವಸ್ಥೆಯನ್ನು ಹಾಗೂ ಇನ್ನಿತರೆ ಸಂಚಾರ ಮಾರ್ಪಾಡುಗಳನ್ನು ಮಾಡುವುದು ಅವಶ್ಯಕವಾಗಿ ಕಂಡುಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧಗಳನ್ನು ಆದೇಶಿಸಿರುತ್ತೇನೆ.

| | | |
|---|---|---|
| 1 | ಲಾಜರ್ ರಸ್ತೆ: | ಲಾಜರ್ ರಸ್ತೆಯಲ್ಲಿ ಡೇವಿಸ್ ರಸ್ತೆ ಜಂಕ್ಷನ್‌ನಿಂದ ಬುದ್ಧವಿಹಾರ್ ರಸ್ತೆಯ ಆಂಜನೇಯ ದೇವಸ್ಥಾನದ ಜಂಕ್ಷನ್ ವರೆಗೆ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ಉತ್ತರದಿಂದ ದಕ್ಷಿಣ ದಿಕ್ಕಿಗೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಇಟ್ಟುಕೊಂಡು ದಕ್ಷಿಣದಿಂದ ಉತ್ತರಕ್ಕೆ ಸಾಗುವ ಸಂಚಾರವನ್ನು ಅಂದರೆ ಬುದ್ಧವಿಹಾರ್ ರಸ್ತೆಯ ಆಂಜನೇಯ ದೇವಸ್ಥಾನದ ಜಂಕ್ಷನ್‌ನಿಂದ ಡೇವಿಸ್ ರಸ್ತೆ ಜಂಕ್ಷನ್ ಕಡೆಗೆ ಸಂಚರಿಸುವ ಎಲ್ಲಾ ತರಹದ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ. |
| 2 | ಎಂ.ಎಂ. ರಸ್ತೆ: | ಎಂ.ಎಂ. ರಸ್ತೆಯಲ್ಲಿ ಮಾಸ್ಕ್ ರಸ್ತೆ-ಎಂ.ಎಂ. ರಸ್ತೆ ಜಂಕ್ಷನ್‌ನಿಂದ ಕ್ಲಾರೆನ್ಸ್ ರಸ್ತೆ ಜಂಕ್ಷನ್‌ವರೆಗೆ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ಉತ್ತರದಿಂದ ದಕ್ಷಿಣ ದಿಕ್ಕಿಗೆ ಸಾಗುವ ಅಂದರೆ ಎಂ.ಎಂ. ರಸ್ತೆ-ಮಾಸ್ಕ್ ರಸ್ತೆ ಜಂಕ್ಷನ್‌ನಿಂದ ಕ್ಲಾರೆನ್ಸ್ ರಸ್ತೆ ಜಂಕ್ಷನ್ ಕಡೆಗೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ಕ್ಲಾರೆನ್ಸ್ ರಸ್ತೆ ಜಂಕ್ಷನ್‌ನಿಂದ ಎಂ.ಎಂ. ರಸ್ತೆ-ಮಾಸ್ಕ್ ರಸ್ತೆ ಜಂಕ್ಷನ್ ಕಡೆಗೆ ದಕ್ಷಿಣದಿಂದ ಉತ್ತರ ದಿಕ್ಕಿಗೆ ಸಾಗುವ ಸಂಚಾರವನ್ನು ನಿಷೇಧಿಸಲಾಗಿದೆ. |
| 3 | ಕೆ.ಇ.ಬಿ. ಕಛೇರಿ ಪಕ್ಕದ ಹೊಸ ರಸ್ತೆ: | ಪಾಟರೀ ರಸ್ತೆಯಲ್ಲಿ ಕೆ.ಇ.ಬಿ. ಕಛೇರಿ ಪಕ್ಕ ಹೊಸದಾಗಿ ನಿರ್ಮಿಸಿರುವ ರಸ್ತೆಯಲ್ಲಿ ಕೆ.ಇ.ಬಿ. ಕಛೇರಿ ಜಂಕ್ಷನ್‌ನಿಂದ ಉತ್ತರದಿಂದ ದಕ್ಷಿಣಕ್ಕೆ ಸಾಗುವ ಎಲ್ಲಾ ವಾಹನಗಳ ಸಂಚಾರವನ್ನು ನಿಷೇಧಿಸಿ ದಕ್ಷಿಣದಿಂದ ಉತ್ತರ ದಿಕ್ಕಿಗೆ ಸಂಚಾರಕ್ಕೆ ಅವಕಾಶ ಮಾಡಿಕೊಡಲಾಗಿದೆ. |

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 17.10.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 11.10.2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್. 1472

ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ ಸಂಖ್ಯೆ: 38/ಸಂವಿ/ಸಿ.ಓ.ಪಿ/2004, ದಿನಾಂಕ: 10ನೇ ಸೆಪ್ಟೆಂಬರ್ 2004 / 16ನೇ ಅಕ್ಟೋಬರ್ 2004**

ಬೆಂಗಳೂರು ನಗರ, ಅಶೋಕನಗರ ಸಂಚಾರ ವಲಯ ವ್ಯಾಪ್ತಿಗೆ ಬರುವ ಲಿಯೋನಾರ್ಡ್ ರಸ್ತೆಯಲ್ಲಿ ದ್ವಿಮುಖ ಸಂಚಾರ ವ್ಯವಸ್ಥೆ ಇದ್ದು ಈ ರಸ್ತೆಯಲ್ಲಿ ಇತ್ತೀಚೆಗೆ ವಾಹನ ಸಂಚಾರ ಅಧಿಕಗೊಂಡು ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಮತ್ತು ವಾಹನ ಸಂಚಾರದಲ್ಲಿ ನಿಧಾನಗತಿ ಉಂಟಾಗಿರುವುದು ಕಂಡು ಬಂದಿರುತ್ತದೆ. ಈ ರಸ್ತೆಯಲ್ಲಿ ಹೊಸೂರು ರಸ್ತೆ ಜಂಕ್ಷನ್‌ನಿನ ಬಿ.ಡಬ್ಲ್ಯೂ.ಎಸ್.ಎಸ್.ಬಿ. ಕಛೇರಿಯಿಂದ ಆಗಾ ಅಬ್ದುಲ್ ಕ್ರಾಸ್ ರಸ್ತೆವರೆಗೆ ದ್ವಿಚಕ್ರ ಮತ್ತು ಕಾರ್ ಪಾರ್ಕಿಂಗ್ ಮಾಡುತ್ತಿರುವುದೇ ಸಂಚಾರ ಸ್ಥಗಿತಗೊಳ್ಳಲು ಪ್ರಮುಖ ಕಾರಣವಾಗಿರುತ್ತೆ. ಸಾರ್ವಜನಿಕ ಹಿತಾಸಕ್ತಿ ಮೇರೆಗೆ ಈ ರಸ್ತೆಯಲ್ಲಿ ವಾಹನ ದಟ್ಟಣೆಯನ್ನು ತಗ್ಗಿಸಲು ಹಾಗೂ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವ ಸಲುವಾಗಿ ಈ ಹಿಂದೆ ವಾಹನ ನಿಲುಗಡೆ ಸಂಬಂಧ ಮಾಡಲಾಗಿದ್ದ ಸಂಚಾರ ಮಾರ್ಪಾಡುಗಳ ಬದಲಾವಣೆ ಅವಶ್ಯಕವಾಗಿ ಕಂಡುಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1) ಲಿಯೊನಾರ್ಡ್ ಲೈನ್ ರಸ್ತೆಯಲ್ಲಿ ಹೊಸೂರ್ ರಸ್ತೆ ಜಂಕ್ಷನ್‌ನಿನ ಬಿ.ಡಬ್ಲ್ಯೂ.ಎಸ್.ಎಸ್.ಬಿ. ಕಛೇರಿಯಿಂದ ಆಗಾ ಅಬ್ದುಲ್ ಕ್ರಾಸ್ ರಸ್ತೆಯವರೆಗೆ ರಸ್ತೆಯ ದಕ್ಷಿಣದ ಕಡೆಗೆ ಕಾರ್ ಪಾರ್ಕಿಂಗ್ ನಿಷೇಧಿಸಿ ದ್ವಿಚಕ್ರ ವಾಹನಗಳ ನಿಲುಗಡೆಗೆ ಅವಕಾಶ ಮಾಡಿಕೊಡಲಾಗಿದೆ.
2) ಲಿಯೊನಾರ್ಡ್ ಲೈನ್ ರಸ್ತೆಯಲ್ಲಿ ಆಗಾ ಅಬ್ದುಲ್ ಕ್ರಾಸ್ ರಸ್ತೆಯಿಂದ ಕಿಂಗ್‌ಸ್ಟನ್ ರಸ್ತೆಯವರೆಗೆ ರಸ್ತೆಯ ಉತ್ತರದ ಕಡೆಗೆ ಕಾರುಗಳ ನಿಲುಗಡೆಗೆ ಅವಕಾಶ ಮಾಡಿಕೊಡಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 20.10.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 16.10.2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್. 1473 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ ಸಂಖ್ಯೆ: 39/ಸಂವಿ/ಸಿ.ಓ.ಪಿ/2004, ದಿನಾಂಕ: 11ನೇ ಅಕ್ಟೋಬರ್ 2004**

ಬೆಂಗಳೂರು ನಗರ, ಅಶೋಕನಗರ ಸಂಚಾರ ವಲಯ ವ್ಯಾಪ್ತಿಗೆ ಬರುವ ನೀಲಸಂದ್ರ ಮುಖ್ಯ ರಸ್ತೆ, ಇನ್‌ಫೆಂಟ್ ಜೀಸಸ್ ಚರ್ಚ್ ರಸ್ತೆ, ದೇವರಾಜ ಅರಸು ರಸ್ತೆ ಮತ್ತು ನೀಲಸಂದ್ರ ಬಜಾರ್ ಸ್ಟ್ರೀಟ್ ಇವುಗಳು ಕಿರಿದಾಗಿದ್ದು, ಹೆಚ್ಚಿನ ವಾಹನ ಸಂಚಾರ ಇರುತ್ತದೆ. ಈ ರಸ್ತೆಗಳಲ್ಲಿ ವಾಹನಗಳ ಚಾಲಕರು ವಾಹನಗಳನ್ನು ರಸ್ತೆಯ ಎರಡೂ ಬದಿಗಳಲ್ಲಿ ಅಡ್ಡಾದಿಡ್ಡಿಯಾಗಿ ನಿಲುಗಡೆ ಮಾಡಿ ಸಾರ್ವಜನಿಕರ ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕೆ ಅಡಚಣೆ ಮಾಡುತ್ತಿರುವುದು ಕಂಡುಬಂದಿರುತ್ತದೆ. ಸಾರ್ವಜನಿಕ ಹಿತಾಸಕ್ತಿ ಮೇರೆಗೆ ಈ ರಸ್ತೆಗಳಲ್ಲಿ ವಾಹನ ದಟ್ಟಣೆಯನ್ನು ತಗ್ಗಿಸಲು ಹಾಗೂ ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವ ಸಲುವಾಗಿ ಈ ರಸ್ತೆಗಳಲ್ಲಿ ಕೆಲವು ಸಂಚಾರ ಮಾರ್ಪಾಡುಗಳನ್ನು ಮಾಡುವುದು ಅವಶ್ಯಕವಾಗಿ ಕಂಡುಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧಗಳನ್ನು ಆದೇಶಿಸಿರುತ್ತೇನೆ.

| | | |
|---|---|---|
| 1 | ನೀಲಸಂದ್ರ ಮುಖ್ಯ ರಸ್ತೆ: | ಈ ರಸ್ತೆಯಲ್ಲಿ ಮಿಲಿಟರಿ ಗೇಟ್ ಬಳಿ ಉಭಯ ಕಡೆಗಳಲ್ಲಿ 50 ಮೀಟರ್ ಮತ್ತು ನ್ಯಾಷನಲ್ ಗ್ಯಾರೇಜ್ ಬಳಿ ಉಭಯ ಕಡೆಗಳಲ್ಲಿ 150 ಅಡಿ ವಾಹನ ನಿಲುಗಡೆಯನ್ನು ನಿಷೇಧಿಸಿ ನೀಲಸಂದ್ರ ರಸ್ತೆ ಪ್ರಾರಂಭದಿಂದ ಆನೇಪಾಳ್ಯ 1ನೇ ಕ್ರಾಸ್ ರಸ್ತೆ ವರೆಗೆ ರಸ್ತೆಯ ಪಶ್ಚಿಮದ ಕಡೆಗೆ ವಾಹನ ನಿಲುಗಡೆಗೆ ಅವಕಾಶವನ್ನು ಕಲ್ಪಿಸಿದೆ. |
| 2 | ಇನ್‌ಫೆಂಟ್ ಜೀಸಸ್ ಚರ್ಚ್ ರಸ್ತೆ: | ಇನ್‌ಫೆಂಟ್ ಜೀಸಸ್ ಚರ್ಚ್ ಮುಂಭಾಗದಲ್ಲಿ ವಾಹನ ನಿಲುಗಡೆಯನ್ನು ನಿಷೇಧಿಸಿ ರಸ್ತೆಯ ಸಾರಾಯಿ ಅಂಗಡಿ ಕ್ರಾಸ್‌ನಿಂದ ಬುಚರಿ ವರೆಗೆ ಉತ್ತರದ ಕಡೆ ವಾಹನ ನಿಲುಗಡೆಯನ್ನು ನಿಷೇಧಿಸಿ ದಕ್ಷಿಣದ ಕಡೆ ವಾಹನ ನಿಲುಗಡೆಗೆ ಅವಕಾಶವನ್ನು ಕಲ್ಪಿಸಿದೆ. |
| 3 | ದೇವರಾಜ ಅರಸು ರಸ್ತೆ: | 1. ಈ ರಸ್ತೆಯಲ್ಲಿ ನೀಲಸಂದ್ರ ಮುಖ್ಯ ರಸ್ತೆಯಿಂದ ಕೆ.ಬಿ.ಎ.ಆರ್. ರಸ್ತೆ ಜಂಕ್ಷನ್‌ವರೆಗೆ ರಸ್ತೆಯ ಉತ್ತರ ಭಾಗದಲ್ಲಿ ವಾಹನ ನಿಲುಗಡೆಯನ್ನು ನಿಷೇಧಿಸಿ ದಕ್ಷಿಣ ಭಾಗದಲ್ಲಿ ವಾಹನ ನಿಲುಗಡೆಗೆ ಅವಕಾಶ ಕಲ್ಪಿಸಿಕೊಡಲಾಗಿದೆ.<br>2. ಕೆ.ಬಿ.ಎ.ಆರ್. ರಸ್ತೆ ಜಂಕ್ಷನ್‌ನಿಂದ 50 ಅಡಿ ಪೂರ್ವಕ್ಕೆ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ. ಮತ್ತು ಇಲ್ಲಿಂದ 5 ಆಟೋಗಳು ಸಹ ಸೇರಿದಂತೆ ವಾಹನಗಳ ನಿಲುಗಡೆಗೆ ಅವಕಾಶವನ್ನು ಕಲ್ಪಿಸಿಕೊಡಲಾಗಿದೆ. |
| 4. | ನೀಲಸಂದ್ರ ಬಜಾರ್ ಸ್ಟ್ರೀಟ್: | ನೀಲಸಂದ್ರ ಬಜಾರ್ ಸ್ಟ್ರೀಟ್‌ನಲ್ಲಿ ವಾಹನಗಳ ನಿಲುಗಡೆಗೆ ಅನುಕೂಲವಾಗುವಂತೆ ಅದಲು ಬದಲು ದಿನಗಳಲ್ಲಿ (Alternate days) ವಾಹನ ನಿಲುಗಡೆಯನ್ನು ಆದೇಶಿಸಿದೆ. |

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 17.10.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 11.10.2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್. 1474 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ ಸಂಖ್ಯೆ: 42/ಸಂವಿ/ಸಿ.ಓ.ಪಿ/2004, ದಿನಾಂಕ: 14/15ನೇ ಅಕ್ಟೋಬರ್ 2004**

ಬೆಂಗಳೂರು ನಗರ, ಅಶೋಕನಗರ ಸಂಚಾರ ವಲಯ ವ್ಯಾಪ್ತಿಗೆ ಬರುವ ಬೆಂಗಳೂರು ಮಹಾನಗರ ಸಾರಿಗೆ ಬಸ್ ನಿಲ್ದಾಣದ ಆಜುಬಾಜು ರಸ್ತೆಗಳಾದ ಲೋಯರ್ ಅಗರಂ ರಸ್ತೆ ಮತ್ತು ವಿವೇಕನಗರ 3 ಮತ್ತು 4ನೇ ಮುಖ್ಯ ರಸ್ತೆಗಳಲ್ಲಿ ವಾಹನ ಸಂಚಾರ ದಟ್ಟಣೆ ಅಧಿಕವಾಗಿದ್ದು ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಮತ್ತು ವಾಹನ ಸಂಚಾರದಲ್ಲಿ ನಿಧಾನಗತಿ ಉಂಟಾಗಿರುವುದು ಹಾಗೂ ಹೆಚ್ಚಿನ ಅಪಘಾತಗಳು ಸಂಭವಿಸುತ್ತಿರುವುದು ಕಂಡು ಬಂದಿರುತ್ತದೆ. ಸಾರ್ವಜನಿಕ ಹಿತಾಸಕ್ತಿ ಮೇರೆಗೆ ಈ ರಸ್ತೆಗಳಲ್ಲಿ ವಾಹನ ದಟ್ಟಣೆಯನ್ನು ತಗ್ಗಿಸಲು ಹಾಗೂ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವ ಹಾಗೂ ಅಪಘಾತಗಳನ್ನು ತಪ್ಪಿಸುವ ಸಲುವಾಗಿ ಏಕಮುಖ ಸಂಚಾರ ವ್ಯವಸ್ಥೆಯನ್ನು ಮಾಡುವುದು ಅವಶ್ಯಕವಾಗಿ ಕಂಡುಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧಗಳನ್ನು ಆದೇಶಿಸಿರುತ್ತೇನೆ.

1. **ವಿವೇಕನಗರ 3ನೇ ಮುಖ್ಯ ರಸ್ತೆ:** ಈ ರಸ್ತೆಯಲ್ಲಿ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ಲೋಯರ್ ಅಗರಂ ರಸ್ತೆಯಿಂದ 3ನೇ ಮುಖ್ಯ ರಸ್ತೆಯಲ್ಲಿ ವಿವೇಕನಗರ ಬಸ್‌ನಿಲ್ದಾಣದವರೆಗೆ ಪಶ್ಚಿಮದಿಂದ ಪೂರ್ವ ದಿಕ್ಕಿಗೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಇಟ್ಟುಕೊಂಡು ಪೂರ್ವದಿಂದ ಪಶ್ಚಿಮಕ್ಕೆ ಸಾಗುವ ಸಂಚಾರವನ್ನು ಅಂದರೆ ವಿವೇಕನಗರ ಬಸ್‌ನಿಲ್ದಾಣದಿಂದ 3ನೇ ಮುಖ್ಯ ರಸ್ತೆಯಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಸಂಚರಿಸುವ ಎಲ್ಲಾ ತರಹದ ವಾಹನಗಳ ಸಂಚಾರವನ್ನು ನಿಷೇಧಿಸಿದೆ.
2. **ವಿವೇಕನಗರ 4ನೇ ಮುಖ್ಯ ರಸ್ತೆ:** ಈ ರಸ್ತೆಯಲ್ಲಿ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ವಿವೇಕನಗರ ಬಸ್‌ನಿಲ್ದಾಣದಿಂದ 4ನೇ ಮುಖ್ಯ ರಸ್ತೆಯಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಇಟ್ಟುಕೊಂಡು ಲೋಯರ್ ಅಗರಂ ರಸ್ತೆಯಿಂದ ವಿವೇಕನಗರ ಬಸ್‌ನಿಲ್ದಾಣದವರೆಗೆ ಪಶ್ಚಿಮದಿಂದ ಪೂರ್ವ ದಿಕ್ಕಿಗೆ 4ನೇ ಮುಖ್ಯ ರಸ್ತೆಯಲ್ಲಿ ಸಾಗುವ ಎಲ್ಲಾ ತರಹದ ವಾಹನಗಳ ಸಂಚಾರವನ್ನು ನಿಷೇಧಿಸಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 20.10.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 15.10.2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್. 1475 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಇವರ ನಡವಳಿಕೆಗಳು**

**ಸಂಖ್ಯೆ: ಜೆಆರ್‌ಬಿ:ಎಲ್‌ಕ್ಯೂಡಿ:33:ಎಲ್‌ಎಂಸಿ:2003-04, ದಿನಾಂಕ: 11ನೇ ಅಕ್ಟೋಬರ್ 2004**

**ವಿಷಯ:** ಸಮಾಪನೆಯಲ್ಲಿರುವ ಶಿರಾಳಕೊಪ್ಪ ಸೀ ಐಲ್ಯಾಂಡ್ ಆಂಡ್ರೂಸ್ ಕಾಟನ್ ಮಾರ್ಕೆಟಿಂಗ್ ಕೋ-ಆಪರೇಟಿವ್ ಸೊಸೈಟಿ ಲಿ., ಶಿರಾಳಕೊಪ್ಪ, ಶಿಕಾರಿಪುರ ತಾಲ್ಲೂಕು, ಇದರ ನೋಂದಣಿ ರದ್ದತಿಯ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಅಪರ ನಿಬಂಧಕರು, (ಬಳಕೆ ಮತ್ತು ಮಾರಾಟ) ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಎಲ್‌ಎಸ್:ಎಲ್‌ಕ್ಯೂಡಿ:ಡಿ-2:4:91-92, ದಿನಾಂಕ: 20.07.1994.

2) ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಪ್ರಸ್ತಾವೆ ಸಂಖ್ಯೆ: ಡಿಆರ್‌ಎಸ್:ಸಮಾಪನೆ:ಓಎಲ್‌ಎಸ್:115:2001-02:915, ದಿನಾಂಕ: 14.9.2004.

**ಪ್ರಸ್ತಾವನೆ:**

ಶಿರಾಳಕೊಪ್ಪ ಸೀ ಐಲ್ಯಾಂಡ್ ಆಂಡ್ರೂಸ್ ಕಾಟನ್ ಮಾರ್ಕೆಟಿಂಗ್ ಕೋ-ಆಪರೇಟಿವ್ ಸೊಸೈಟಿ ಲಿ., ಶಿರಾಳಕೊಪ್ಪ, ಶಿಕಾರಿಪುರ ತಾಲ್ಲೂಕು ಶಿವಮೊಗ್ಗ ಜಿಲ್ಲೆ, ಈ ಸಹಕಾರ ಸಂಘವು ಬೆಂಗಳೂರು ವಿಭಾಗೀಯ ಜಂಟಿ ನಿಬಂಧಕರ ಆದೇಶ ಸಂಖ್ಯೆ: ಜೆಆರ್‌ಬಿ:ಸಲ-11:ಆರ್‌ಜಿಎನ್:46:ಆರ್‌ಸಿಎಸ್:2831:74-75, ದಿನಾಂಕ: 05.10.1974 ರನ್ವಯ ನೋಂದಣಿಯಾಗಿದ್ದು, ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ, ಸಾಗರ ಹಾಗೂ ಸೊರಬ ತಾಲ್ಲೂಕುಗಳ ಆಡಳಿತ ವ್ಯಾಪ್ತಿಯನ್ನು ಹೊಂದಿರುತ್ತದೆ. ಸದರಿ ಸಹಕಾರ ಸಂಘವು 1983-84ನೇ ಸಾಲಿನಿಂದಲೂ ತನ್ನ ಉಪನಿಯಮಗಳನ್ವಯ ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಆದೇಶದನ್ವಯ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(ಬಿ) ಅನ್ವಯ ಸಮಾಪನೆಯಲ್ಲಿರಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಶಿಕಾರಿಪುರ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ನೇಮಕಗೊಂಡ ಸಮಾಪನಾಧಿಕಾರಿಯವರು ದಿನಾಂಕ: 16.12.1994 ರಂದು ಸಂಘದ ಪ್ರಭಾರ ವಹಿಸಿಕೊಂಡಿರುತ್ತಾರೆ.

ಸಮಾಪನಾಧಿಕಾರಿಯವರು ದಿನಾಂಕ: 30.07.2004 ರಂದು ಅಂತಿಮ ಸಭೆ ನಡೆಸಿದ್ದು, ಸಂಘದ ಆಸ್ತಿ-ಜವಾಬ್ದಾರಿಗಳನ್ನು ಶೂನ್ಯಗೊಳಿಸುವ ಬಗ್ಗೆ ತೀರ್ಮಾನ ಕೈಗೊಂಡಿರುತ್ತಾರೆ. ಅದರನ್ವಯ, ಸಂಘದಲ್ಲಿ ಸರ್ಕಾರಕ್ಕೆ ಯಾವುದೇ ಷೇರು ಸಾಲಗಳು ಮರು ಪಾವತಿಗಾಗಿ ಬಾಕಿಯಿರುವುದಿಲ್ಲ. ಸಂಘದಲ್ಲಿ ಯಾವುದೇ ಸ್ಥಿರಾಸ್ತಿಗಳು ಇರುವುದಿಲ್ಲ. ಸಂಘದಲ್ಲಿ ಲಭ್ಯವಿದ್ದ ಪೀಠೋಪಕರಣಗಳನ್ನು ಬಹಿರಂಗ ಹರಾಜಿನ ಮುಖಾಂತರ ಮಾರಾಟ ಮಾಡಿ ಬಂದ ಹಣ ರೂ.3620/- ಗಳನ್ನು ಸಮಾಪನಾಧಿಕಾರಿ ಮುಂಗಡ ಹಾಗೂ ಸಮಾಪನಾ ವೆಚ್ಚಗಳಿಗೆ ಹೊಂದಾಣಿಕೆ ಮಾಡಿಕೊಂಡಿರುತ್ತಾರೆ. ಜಿಲ್ಲಾ

ಸಹಕಾರ ಕೇಂದ್ರ ಬ್ಯಾಂಕಿನ ಚಾಲ್ತಿ ಖಾತೆಯ ಮೊತ್ತ ಷೇರು ಹಣ, ಆಪದ್ಧನ ಠೇವಣಿ ಇವುಗಳನ್ನು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿನ ಚಾಲ್ತಿ ಕುಳುವಾರು ಪಟ್ಟಿಗಳು ದೊರೆಯದ ಕಾರಣ ಆಸ್ತಿಗಳನ್ನು ನಷ್ಟದ ಖಾತೆಗೆ ವರ್ಗಾಯಿಸಿದ್ದು, ಬ್ಯಾಂಕಿನ ಸಿ.ಸಿ. ಸಾಲಕ್ಕೆ ಹೊಂದಾಣಿಕೆ ಮಾಡಿಕೊಂಡಿರುತ್ತಾರೆ. ಇತರೆ ಹೂಡಿಕೆಗಳು, ಮುಂಗಡಗಳ ಬಗ್ಗೆ ಯಾವುದೇ ದಾಖಲಾತಿಗಳು ಇಲ್ಲದ ಪ್ರಯುಕ್ತ ಇವುಗಳನ್ನು ಹೊಂದಾಣಿಕೆ ಲೆಕ್ಕದ ಮುಖಾಂತರ ನಷ್ಟದ ಖಾತೆಗೆ ವರ್ಗಾಯಿಸಿರುತ್ತಾರೆ. ದಿನಾಂಕ: 31.03.2004ಕ್ಕೆ ಇದ್ದಂತೆ ಷೇರು ಬಂಡವಾಳ ಕಾಯ್ದಿಟ್ಟ ನಿಧಿಯನ್ನು ಸಹ ದಾಖಲಾತಿಗಳು ಇಲ್ಲದ ಕಾರಣ ಲಾಭದ ಖಾತೆಗೆ ವರ್ಗಾಯಿಸಿರುತ್ತಾರೆ. ಈ ರೀತಿಯಾಗಿ ದಾಖಲಾತಿಗಳು, ಆಸ್ತಿ-ಜವಾಬ್ದಾರಿಗಳನ್ನು ಶೂನ್ಯಗೊಳಿಸಿರುತ್ತಾರೆ. ಈ ಠರಾವನ್ನು ಸಹಕಾರ ಸಂಘಗಳ ಲೆಕ್ಕಪರಿಶೋಧಕರು, ಶಿಕಾರಿಪುರ ಇವರು 2003-04 ಮತ್ತು 31.07.2004ರ ಅಂತ್ಯಕ್ಕೆ ಲೆಕ್ಕಪತ್ರಗಳನ್ನು ಪರಿಶೀಲಿಸಿ ದೃಢೀಕರಿಸಿರುವುದಾಗಿ ಸಮಾಪನಾಧಿಕಾರಿಯವರು ವರದಿ ಮಾಡಿದ್ದಾರೆ.

ಈ ಅಂಶಗಳ ಹಿನ್ನೆಲೆಯಲ್ಲಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಬೇಕೆಂದು ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಇವರು ಉಲ್ಲೇಖ (2) ರಲ್ಲಿ ಪ್ರಸ್ತಾವೆ ಸಲ್ಲಿಸಿರುತ್ತಾರೆ. ಪ್ರಸ್ತಾವೆಯನ್ನು ಪರಿಶೀಲಿಸಲಾಗಿ ಸಂಘದಲ್ಲಿ ಸರ್ಕಾರದ ವಿನಿಯೋಗಗಳೇನು ಇಲ್ಲದಿರುವುದನ್ನು ಹಾಗೂ ಸಂಘದ ಪುನಃಶ್ಚೇತನಕ್ಕೆ ಸಂಘದ ಹಿಂದಿನ ಆಡಳಿತ ಮಂಡಳಿ ಸದಸ್ಯರಾಗಲೀ, ಸದಸ್ಯರುಗಳಾಗಲೀ ಮುಂದೆ ಬರದೇ ಅನಾಸಕ್ತಿ ತೋರಿದ್ದು ಸಂಘದ ಪುನಃಶ್ಚೇತನ ಸಾಧ್ಯವಿಲ್ಲವೆಂದು ಮನಗಂಡು, ಈ ಸಂಘವನ್ನು ಸಮಾಪನೆಯಲ್ಲಿಯೇ ಮುಂದುವರೆಸುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನವಿಲ್ಲದಿರುವುದನ್ನು ಗಮನಿಸಿದ್ದು, ಉಪನಿಬಂಧಕರು, ಶಿವಮೊಗ್ಗ ರವರ ಶಿಫಾರಸ್ಸಿನನ್ವಯ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವುದೇ ಸೂಕ್ತವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಸಮಾಪನೆಯಲ್ಲಿರುವ ಶಿರಾಳಕೊಪ್ಪ ಸೀ ಐಲ್ಯಾಂಡ್ ಆಂಡ್ರೋಸ್ ಕಾಟನ್ ಮಾರ್ಕೆಟಿಂಗ್ ಕೋ-ಆಪರೇಟಿವ್ ಸೊಸೈಟಿ ಲಿ., ಶಿರಾಳಕೊಪ್ಪ, ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಜೆಆರ್‌ಬಿ:ಸಲ-11:ಆರ್‌ಜಿಎನ್: 46:ಆರ್‌ಸಿಎಸ್:2831:1974-75, ದಿನಾಂಕ: 05.10.1974ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ನಿಂತು ಹೋಗಿರುತ್ತದೆಂದು, ಸಂಘವು ಸಂಪೂರ್ಣವಾಗಿ ತನ್ನ ಚಟುವಟಿಕೆಗಳನ್ನು ಕಳೆದುಕೊಂಡಿದೆಯೆಂದು ಪರಿಗಣಿಸತಕ್ಕದ್ದು, ಈ ಆದೇಶದ ದಿನಾಂಕದಿಂದ 03 ವರ್ಷಗಳವರೆಗೆ ಸಂಘಕ್ಕೆ ಸಂಬಂಧಿಸಿದ ದಾಖಲೆಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ, ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 11ನೇ ಅಕ್ಟೋಬರ್ 2004 ರಂದು ಸ್ವ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

**ಬಸವೇಗೌಡ**

ಪಿ.ಆರ್. 1476 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಕಾಪಕಾ:ಎಫ್:ಎಸ್ಆರ್-40:2004**

**ಅರ್ಜಿದಾರರು:** 1) ಶ್ರೀ ಬಸವೇಗೌಡ ಬಿನ್ ದೇವೇಗೌಡ, 60 ವರ್ಷ, 2) ಶ್ರೀಮತಿ ಸುಬ್ಬಮ್ಮ ಕೋಂ ದೇವೇಗೌಡ, 50 ವರ್ಷ, ವಾಸ: ಬಂಡಿಶೆಟ್ಟಿ ಹಳ್ಳಿ, ಹೊಳೇನರಸೀಪುರ ತಾಲ್ಲೂಕು, ಹಾಸನ ಜಿಲ್ಲೆ.

**ಪ್ರತಿವಾದಿಗಳು:** 1) ಶ್ರೀ ಎಂ. ಅನ್ವರ್ ಬಿನ್ ಬಾಬ, ಲಾರಿ ಮಾಲೀಕರು, ಡಿ.ಡಿ.ಯು.ಟಿ.ಟಿ. 2ನೇ ಸ್ಟೇಜ್, ಇಂಡಸ್ಟ್ರಿಯಲ್ ಏರಿಯಾ, ಯಶವಂತಪುರ, ಬೆಂಗಳೂರು.

2) ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ. ಲಿ., ನಂ.29, ಚೊಕ್ಕಸಂದ್ರ, ಬೆಂಗಳೂರು ಸ್ಥಳೀಯ ಶಾಖೆ ಪ್ರತಿನಿಧಿಸುವವರು: ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂಪೆನಿ ಲಿಮಿಟೆಡ್, ಶ್ರೀ ವೆಂಕಟೇಶ್ವರ ಬಿಲ್ಡಿಂಗ್, ಬಿ.ಎಂ. ರಸ್ತೆ, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ರಮೇಶ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 25.4.2004 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.-

**ಹೆಚ್. ಗೋಪಾಲಗೌಡ**

ಪಿ.ಆರ್. 1477 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಕಾಪಕಾ:ಎಫ್:ಎಸ್ಆರ್-39:2004**

**ಅರ್ಜಿದಾರರು:** 1) ಶ್ರೀ ಜವರೇಗೌಡ ಬಿನ್ ಕೆಂಪೇಗೌಡ, 2) ಶ್ರೀಮತಿ ಕೆಂಪಮ್ಮ ಕೋಂ ಲೇಟ್ ಜವರೇಗೌಡ, 50 ವರ್ಷ,
3) ಪುಷ್ಪಾ ಬಿನ್ ಜವರೇಗೌಡ, 18 ವರ್ಷ 4) ಪೂರ್ಣಿಮಾ ಬಿನ್ ಜವರೇಗೌಡ, 16 ವರ್ಷ,
5) ಹೇಮಾವತಿ ಕೋಂ ಲೇಟ್ ಅಣ್ಣಾಜಿಗೌಡ, 6) ಪ್ರದೀಪ್ ಬಿನ್ ಅಣ್ಣಾಜಿಗೌಡ, 11 ವರ್ಷ,
7) ಪ್ರಮೋದ್ ಬಿನ್ ಲೇಟ್ ಅಣ್ಣಾಜಿಗೌಡ,
ವಾಸ: ನಾಗಲಾಪುರ ಗ್ರಾಮ, ಕಸಬಾ ಹೋಬಳಿ, ಹೊಳೇನರಸೀಪುರ ತಾಲ್ಲೂಕು.

**ಪ್ರತಿವಾದಿಗಳು:** 1) ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ, (ಮಂಗಳೂರು ವಿದ್ಯುತ್ ಸರಬರಾಜು ಕಂಪನಿ) ಹೊಳೇನರಸೀಪುರ ತಾಲ್ಲೂಕು, ಹೊಳೇನರಸೀಪುರ.
2) ಶ್ರೀ ಕೆ. ಕುಮಾರಸ್ವಾಮಿ ಅಲಿಯಾಸ್ ಕುಮಾರ ಬಿನ್ ಕೃಷ್ಣಯ್ಯ, ವಿದ್ಯುತ್ ಗುತ್ತಿಗೆದಾರರು, ದೇವಾಂಗ ಬೀದಿ, ಮನೆ ನಂ.1196, ಹೊಳೇನರಸೀಪುರ ಟೌನ್, ಹೊಳೇನರಸೀಪುರ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ವೆಂಕಟೇಶ್ ಉರುಫ್ ಅಣ್ಣಾಜಿಗೌಡ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 25.2.1997 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.-

**ಹೆಚ್. ಗೋಪಾಲಗೌಡ**

ಪಿ.ಆರ್. 1478 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಕಾಪಕಾ:ಎಫ್:ಎಸ್ಆರ್-41:2004**

**ಅರ್ಜಿದಾರರು:** 1) ಶ್ರೀ ಜವರಯ್ಯ ಬಿನ್ ತಿಮ್ಮಯ್ಯ, 2) ಶ್ರೀಮತಿ ರತ್ನಮ್ಮ ಕೋಂ ಜವರಯ್ಯ,
3) ಕು: ಶೈಲಾ ಬಿನ್ ಜವರಯ್ಯ, 17 ವರ್ಷ, 4) ಗಿರೀಶ್ ಬಿನ್ ಜವರಯ್ಯ, 15 ವರ್ಷ.
ವಾಸ: ಕಾಟೀಹಳ್ಳಿ ಗ್ರಾಮ, ಕಸಬಾ ಹೋಬಳಿ, ಆಲೂರು ತಾಲ್ಲೂಕು.

**ಪ್ರತಿವಾದಿಗಳು:** ಶ್ರೀ ಕೆ.ಆರ್. ಯೋಗೀಶ್ ಬಿನ್ ರಾಜೇಗೌಡ, ಕೆ. ಕಾಟೀಹಳ್ಳಿ ಗ್ರಾಮ, ಕಸಬಾ ಹೋಬಳಿ, ಆಲೂರು ತಾಲ್ಲೂಕು.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀಧರ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 23.8.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.-

**ಹೆಚ್. ಗೋಪಾಲಗೌಡ**

ಪಿ.ಆರ್. 1479 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕರಣ ಸಂಖ್ಯೆ: ಕಾಪಕ:ಕಸ-58/2004, ದಿನಾಂಕ: 18ನೇ ಅಕ್ಟೋಬರ್ 2004**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಹನುಮ ನಾಯ್ಕ ಬಿನ್ ಕೊಬ್ಯಾನಾಯಕ,<br>2) ಜೈನಾಬಾಯಿ ಅಲಿಯಾಸ್ ಸೀತಾಬಾಯಿ,<br>ಇವರುಗಳ ವಿಳಾಸ: ಕೊರಟಗೆರೆ ಗ್ರಾಮ,<br>ಶಿಕಾರಿಪುರ ತಾಲ್ಲೂಕು. | | 1) ಎಸ್. ಕೀಶನ್ ರೈಲ್ವೇಗುತ್ತಿಗೆದಾರರು, ಸೂಡುರು ಕ್ಯಾಂಪ್, ಶಿವಮೊಗ್ಗ ತಾಲ್ಲೂಕು.<br>2) ಶಿವರಾಜ್ ಬಿನ್ ಡೊಲಪ್ಪ, ರೈಲ್ವೇ ಗುತ್ತಿಗೆದಾರರು, ಸೂಡೂರು ಕ್ಯಾಂಪ್ ಶಿವಮೊಗ್ಗ ತಾಲ್ಲೂಕು.<br>3) ಮುಖ್ಯ ವ್ಯವಸ್ಥಾಪಕರು, ರೈಲ್ವೇವಲಯ, ಹುಬ್ಬಳ್ಳಿ. |

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದು ಏನೆಂದರೆ, ದಿ: ಪೆಮಾಬಾಯಿ ಬಿನ್ ಕೊಬ್ಯಾನಾಯಕ ರವರು ಪ್ರತಿವಾದಿಯವರಲ್ಲಿ ಕಾರ್ಮಿಕ ಆಗಿ ಕೆಲಸದ ಮೇಲೆ ಇದ್ದಾಗ 12.04.03 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 23.09.2004 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾನೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದು ಏನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 1480 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕರಣ ಸಂಖ್ಯೆ: ಕಾಪಕ:ಕಸ-59/2004, ದಿನಾಂಕ: 18ನೇ ಅಕ್ಟೋಬರ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1) ಬಿ. ಮಂಜಪ್ಪ ಬಿನ್ ಹುಚ್ಚಪ್ಪ, ಕೃಷಿ ಕಾರ್ಮಿಕ ಹೊನ್ನೆಹೊಸೂರು ಗ್ರಾಮ ಕುಂಸಿ ಹೋಬಳಿ, ತುಪ್ಪೂರು ಅಂಚೆ, ಶಿವಮೊಗ್ಗ ತಾಲ್ಲೂಕು.

1) ಬಸವರಾಜ ಬಿನ್ ಗಂಗಪ್ಪ, ಲಾರಿ ಡ್ರೈವರ್ ಬಾಬುರಾವ್ ಮನೆ ಹತ್ತಿರ, ವಡ್ಡರ ಹಟ್ಟಿ ಗ್ರಾಮ, ಗಂಗಾವತಿ ತಾಲ್ಲೂಕು, ಬಳ್ಳಾರಿ ಜಿಲ್ಲೆ.
2) ಮೊಹಮದ್ ರಬಿಬುಲ್ಲಾ ರೆಹಮನ್ ಬಿನ್ ಮೊಹಮದ್ ಮರ್ದನ್ ಅಲಿ, ಬಸವೇಶ್ವರ ಆಯಿಲ್ ಮಿಲ್ ಹತ್ತಿರ ಗಂಗಾವತಿ ತಾಲ್ಲೂಕು.
3) ದಿ ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., ಶಿವಮೊಗ್ಗ.
4) ಜಿ.ಎಸ್. ಶ್ರೀನಿವಾಸ ಬಿನ್ ಶಂಕರ್ ಟ್ರಾನ್ಸ್‌ಪೋರ್ಟ್ ಕಂಟ್ರಾಕ್ಟರ್, ಜೈಲ್ ರಸ್ತೆ, ಶಿವಮೊಗ್ಗ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದು ಏನೆಂದರೆ, ವಿಜಯಕುಮಾರ್ ಬಿನ್ ಬಿ. ಮಂಜಪ್ಪ ರವರು ಪ್ರತಿವಾದಿಯವರಲ್ಲಿ ಡ್ರೈವರ್ ಆಗಿ ಕೆಲಸದ ಮೇಲೆ ಇದ್ದಾಗ 12.07.04 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 01.10.2004 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾನೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದು ಏನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 1481 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕರಣ ಸಂಖ್ಯೆ: ಕಾಪಕ:ಕಸ-62/2004, ದಿನಾಂಕ: 18ನೇ ಅಕ್ಟೋಬರ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1) ಮಂಜಮ್ಮ ಕೋಂ ದಿ ಬಾಬಣ್ಣ, 2) ಶಾರದಮ್ಮ ಕೋಂ ಭೀಮಪ್ಪ,
3) ಮಂಜುಳ ಬಿನ್ ಭೀಮಪ್ಪ, 4) ಮಂಜು ಬಿನ್ ಬಾಬಣ್ಣ,
ಇವರುಗಳ ವಿಳಾಸ: ಕುಂಬಾರ ಬೀದಿ, ಆರ್ಯರ ಕೇರಿ, ಹೊನ್ನಾಳಿ.

1) ಲಾರ್ಸೆನ್ ಅಂಡ್ ಟೊಬ್ರೊ, ಲಿ., ಯುನಿವರ್ಸಿಟಿ ಕಾಂಪ್ಲೆಕ್ಸ್ ಪ್ರಾಜೆಕ್ಟ್ ಎದುರು, ಇಂದಿರ ಬ್ಲಾಕ್ ಮಣಿಪಾಲ್.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದು ಏನೆಂದರೆ, ಬಾಬಣ್ಣ ಅಲಿಯಾಸ್ ಬಾಬು ರವರು ಪ್ರತಿವಾದಿಯವರಲ್ಲಿ ಕಾರ್ಮಿಕರಾಗಿ ಕೆಲಸದ ಮೇಲೆ ಇದ್ದಾಗ ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 14.10.2004 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾನೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದು ಏನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 1482 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ-2, ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು-2 ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್-30/2004(ಎಫ್), ದಿನಾಂಕ: 9ನೇ ಸೆಪ್ಟೆಂಬರ್ 2004**

**ಅರ್ಜಿದಾರರು:**

1) ಶ್ರೀಮತಿ ಸುಂದರಿ ಕೋಂ ದಿ ಬಾಬುನಾಯ್ಕ
2) ರೂಪ, ದಿ. ಬಾಬುನಾಯ್ಕರವರ ಮಗಳು,
3) ದೀಪ, ದಿ. ಬಾಬುನಾಯ್ಕರವರ ಮಗಳು, ಅಗಾಜೆ ಮನೆ, ನರಿಮೊಗರು ಗ್ರಾಮ ಮತ್ತು ಅಂಚೆ, ಪುತ್ತೂರು ತಾಲ್ಲೂಕು, ದ.ಕ. ಜಿಲ್ಲೆ.

**ಪ್ರತಿವಾದಿಗಳು:**

1) ವಿಲ್‌ಪ್ರೆಡ್ ಪ್ರಸನ್ನ ಬಿನ್ ಕಾಮಿಲ್ ಪ್ರಸನ್ನ, ರೋಟ್ರಪುರ ಮನೆ, ಚಿಕ್ಕಮುಡ್ನೂರು ಗ್ರಾಮ, ಪುತ್ತೂರು ತಾಲ್ಲೂಕು.
2) ದಿ ಮ್ಯಾನೇಜರ್, ನ್ಯಾಷನಲ್ ಇನ್ಸೂರೆನ್ಸ್ ಕಂಪನಿ, ಬ್ರಾಂಚ್ ಆಫೀಸು, ಶ್ರೀ ಧರ್ಮಸ್ಥಳ ಮುಖ್ಯ ರಸ್ತೆ, ಪುತ್ತೂರು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಸುಂದರಿ ಇವರು ತಮ್ಮ ಗಂಡನಾದ ಶ್ರೀ ಬಾಬುನಾಯ್ಕ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 12.6.2004 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**

ಪಿ.ಆರ್. 1483 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪ ವಿಭಾಗ-2, ಮಂಗಳೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ**

**ಮರಣ ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:147:2004, ದಿನಾಂಕ: 4ನೇ ಅಕ್ಟೋಬರ್ 2004**

**ಅರ್ಜಿದಾರರು:**

1) ಶ್ರೀಮತಿ ನೀಲಮ್ಮಾ (ಜಗದೇವಿ) ಆಯ್ಯುಪ್ಪಾ ಹಂದರಕಿ, ಹೆಗಡ್ಯಾಳ, ಬಿಜಾಪುರ ತಾ: ಜಿಲ್ಲೆ. (ಹಾಗೂ ಇತರೆ 4 ಜನರು)

**ಪ್ರತಿವಾದಿಗಳು:**

1) ಸುರೇಶ ಶರಣಪ್ಪಾ ಬಟ್ಟಳಿ, ವಾಸ: ದುರ್ಗಮ್ಮಾ ಗುಡಿ ಹತ್ತಿರ, ಬಸವೇಶ್ವರ ಕಾಲೋನಿ, ರಿಕ್ಷಾ ಸ್ಟ್ಯಾಂಡ್ ಹತ್ತಿರ, ಗುಲ್ಬರ್ಗಾ.

ಸಾರ್ವಜನಿಕರಿಗೆ ಮತ್ತು ಸಂಬಂಧ ಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಆಯ್ಯುಪ್ಪಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 31.8.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ನಾನು ಶ್ರೀಮತಿ ನೀಲಮ್ಮಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**

ಪಿ.ಆರ್. 1484 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ**

**ಮರಣ ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:147:2004, ದಿನಾಂಕ: 4ನೇ ಅಕ್ಟೋಬರ್ 2004**

**ಅರ್ಜಿದಾರರು:**

1) ಶ್ರೀಮತಿ ಮಂತಾ ವಸಂತ ಗಡೇಕರ ವಾಸ: ಜಲನಗರ, ಬಿಜಾಪೂರ ಹಾಗೂ ಇತರೆ 4 ಜನರು

**ಪ್ರತಿವಾದಿಗಳು:**

1) ದಿ ಮ್ಯಾನೇಜಿಂಗ್ ಡೈರೆಕ್ಟರ್, ಎಂ.ಎಸ್.ಎಸ್.ಟಿ. ಮುಂಬಾಯಿ, (ಡಿವಿಜನಲ್ ಕಂಟ್ರೋಲರ್, ಮಿರಜ ಇವರ ಮುಖಾಂತರ)

ಸಾರ್ವಜನಿಕರಿಗೆ ಮತ್ತು ಸಂಬಂಧ ಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ವಸಂತ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 18.8.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಮಂತಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**

ಪಿ.ಆರ್. 1485 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ**

**ಮರಣ ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:155:2004, ದಿನಾಂಕ: 8ನೇ ಅಕ್ಟೋಬರ್ 2004**

**ಅರ್ಜಿದಾರರು:**

1) ವಂದನಾ ಗಂಡ ಕೇರೆಪ್ಪಾ ಅಲ್ದಾರ, ವಾಸ: ಉಪ್ಪಲದಿನ್ನಿ, ತಾ-ಬಸವನ ಬಾಗೇವಾಡಿ, ಜಿಲ್ಲೆ: ಬಿಜಾಪೂರ.

**ಪ್ರತಿವಾದಿಗಳು:**

1) ಉಷಾ ಯಶವಂತ ಜಾಧವ, ವಾಸ: ಕಾರಜೋಳ ಪೊ-ನಂದರಗಿ, ತಾ-ಮಂಗಳವೇಡಾ, ಜಿ: ಸೊಲ್ಲಾಪೂರ,

2) ದಿ ಮ್ಯಾನೇಜರ್, ನ್ಯೂ ಇಂಡಿಯಾ ಇನ್ಶೂರೆನ್ಸ್ ಕಂ. ಲಿ., ಗುರುಕುಲ ರೋಡ್, ಬಿಜಾಪೂರ.

ಸಾರ್ವಜನಿಕರಿಗೆ ಮತ್ತು ಸಂಬಂಧ ಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಕೇರೆಪ್ಪಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 3.9.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ವಂದನಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**

ಪಿ.ಆರ್. 1486 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**IN THE COURT OF COMMISSIONER FOR WORKMEN'S COMPENSATION, BIDAR**

**No: LOB/WCA/Cr-51/2004**

| **APPLICANTS:** | **V/S** | **RESPONDENTS** |
|---|---|---|
| Sangeeta W/o Late Panduranga Mejre, age 25 years, Occ: House hold, R/o Talbag Taluk, Basawakalyan District, Bidar. and 5 others. | | S. Sathyanarayan, age Major Occ Business R/o Yelvarti village, Shankarpalli Moudat, Hyderabad, Manager, National Insurance Co. Ltd. Hyderabad. |

**PROCLAMATION**

Smt. Sangeeta W/o Late Panduranga Mejre, R/o Talbag Taluk, Basawakalyan District, Bidar. has filed application in this court claiming compensation stating that Late: Pandurang Mejre was working as Driver under the Respondent No.I he met with an accident arising out of and during the course of employment as a result he died on:22.2.2004.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

P.R. 1487 Commissioner For Workmen's Compensation, Bidar.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ**

**ಮರಣ ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:143:2004, ದಿನಾಂಕ: 4ನೇ ಅಕ್ಟೋಬರ್ 2004**

| **ಅರ್ಜಿದಾರರು:** | **ಪ್ರತಿವಾದಿಗಳು:** |
|---|---|
| 1) ಶ್ರೀಮತಿ ಸುನೀತಾ ವಿಠ್ಠಲ ಪವಾರ, ವಾಸ: ಕನಮಡಿ, ಬಿಜಾಪೂರ ತಾ:, ಜಿಲ್ಲೆ, (ಇತರೆ 2 ಜನರು) | 1) ಅನೀಲ ರಾಮಚಂದ್ರ ಚವ್ವಾಣ, ಶ್ರೀ ಗಜಾನನ ಅಪಾರ್ಟ್‌ಮೆಂಟ್, ನಂ.3, ಪ್ಲಾಟ್ ನಂ.201, 2ನೇ ಹೈಸ್ಕೂಲ್ ಕಲ್ಯಾಣ (ಇಸ್ಟ್), ಥಾಣೆ ಜಿಲ್ಲೆ.<br>2) ದಿ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., ಎಸ್.ಎಸ್. ಫ್ರಂಟ್ ರೋಡ್, ಬಿಜಾಪೂರ. |

ಸಾರ್ವಜನಿಕರಿಗೆ ಮತ್ತು ಸಂಬಂಧ ಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ವಿಠ್ಠಲ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 12.8.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಸುನೀತಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**

ಪಿ.ಆರ್. 1488 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ**

**ಮರಣ ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:136:2004, ದಿನಾಂಕ: 15ನೇ ಸೆಪ್ಟೆಂಬರ್ 2004**

| **ಅರ್ಜಿದಾರರು:** | **ಪ್ರತಿವಾದಿಗಳು:** |
|---|---|
| 1) ಗುರನ್ನಾ ಬೀಮರಾಯ ದೋಮನಾಳ ವಾಸ: ತುಂಬಗಿ, ಮುದ್ದೇಬಿಹಾಳ ತಾ: ಬಿಜಾಪೂರ ಜಿಲ್ಲೆ, (ಹಾಗೂ ಇತರೆ ಇಬ್ಬರು) | 1) ಶ್ರೀಮತಿ ಪೂರ್ಣಿಮಾ ಚಂದರಕಾಂತ ಜಾಧವ, ವಾಸ: ಮಲಕಾಪೂರ, ಕರಾದ ತಾ: ಸಾತಾರಾ ಜಿಲ್ಲೆ, (ಮಹಾರಾಷ್ಟ್ರ ರಾಜ್ಯ). |

ಸಾರ್ವಜನಿಕರಿಗೆ ಮತ್ತು ಸಂಬಂಧ ಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಬಸಮ್ಮಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 2.5.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ

ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಗುರನ್ನಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**

ಪಿ.ಆರ್. 1489 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ

**ಮರಣ ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:135:2004, ದಿನಾಂಕ: 15ನೇ ಸೆಪ್ಟೆಂಬರ್ 2004**

**ಅರ್ಜಿದಾರರು:**

1) ಮಾಯಪ್ಪಾ ಮೇಘು ರಾಠೋಡ,
ವಾಸ: ಧರಿ ಬಡಚಿ ತಾಂಡಾ, ಚಿತ್ರ ತಾ:,
ಸಾಂಗಲಿ ಜಿಲ್ಲೆ, (ಹಾಗೂ ಇತರೆ ಒಬ್ಬರು)

**ಪ್ರತಿವಾದಿಗಳು:**

1) ಹನುಮಪ್ಪಾ ವಿರೋಪ್ಪಾ ಬದರಿ,
ವಾಸ: ದೇವರಗೆನ್ನೂರು, ಬಿಜಾಪೂರ ತಾಲ್ಲೂಕು, ಜಿಲ್ಲೆ.
2) ದಿ ನ್ಯೂ ಇಂಡಿಯಾ ಇನ್ಶೂರೆನ್ಸ್ ಕಂ. ಲಿ., ಬಿಜಾಪೂರ.

ಸಾರ್ವಜನಿಕರಿಗೆ ಮತ್ತು ಸಂಬಂಧ ಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಬಾಬು ಉರುಫ್ ಬಂದು ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 26.8.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಮಾಯಪ್ಪಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**

ಪಿ.ಆರ್. 1490 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ

**ಮರಣ ಪ್ರಕರಣ ಸಂಖ್ಯೆ: ಕಾಅಬಿ:ಕಾನಪ:131:2004, ದಿನಾಂಕ: 30ನೇ ಆಗಸ್ಟ್ 2004**

**ಅರ್ಜಿದಾರರು:**

1) ಶೆಟ್ಟೆಪ್ಪಾ ಪೊಮಪ್ಪಾ ಲಮಾಣಿ,
ವಾಸ: ಕೋಲೂರು ಎಲ್.ಟಿ., ಮುದ್ದೇಬಿಹಾಳ
ತಾಲ್ಲೂಕು, (ಇತರೆ ಒಬ್ಬರು)

**ಪ್ರತಿವಾದಿಗಳು:**

1) ಈರಣ್ಣಾ ರಂಗಪ್ಪಾ ಕಿರಸೂರ,
ವಾಸ: ಆರ್.ಟಿ.ಓ. ಆಫೀಸ್ ಹತ್ತಿರ, ನವನಗರ,
ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ.
2) ದಿ ನ್ಯಾಶನಲ್ ಇನ್ಶೂರೆನ್ಸ್ ಕಂ. ಲಿ., ಬಿಜಾಪೂರ.

ಸಾರ್ವಜನಿಕರಿಗೆ ಮತ್ತು ಸಂಬಂಧ ಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಪಟ್ಟೆಪ್ಪಾ ಉರುಫ್ ತಿರುಪತಿ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 10.6.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಶೆಟ್ಟೆಪ್ಪಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**

ಪಿ.ಆರ್. 1491 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

## ಚಿತ್ರದುರ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ, ಚಿತ್ರದುರ್ಗ-577 501

**ಸಂಖ್ಯೆ: ವಸೂಲಿ ವಿಭಾಗ:ಆದೇಶ ತಿದ್ದುಪಡಿ:1449:2004, ದಿನಾಂಕ: 16ನೇ ಅಕ್ಟೋಬರ್ 2004**

**ವಿಷಯ:** ಮೈಲನಹಳ್ಳಿ ವ್ಯ.ಸೇ.ಸ. ಬ್ಯಾಂಕ್ ನಿ., ಮೈಲನಹಳ್ಳಿ ಈ ಸಂಘದ ಹೆಸರಿಗೆ ವರ್ಗಾವಣೆಯಾಗಿರುವ ಸ್ಥಿರಾಸ್ತಿಯನ್ನು ಸಹಕಾರ ಸಂಘಗಳ ಕಾಯಿದೆ ಹಾಗೂ ನಿಯಮ 38(ಎ) (15) ರನ್ವಯ ವರ್ಗಾವಣೆ ಆದೇಶವನ್ನು ಹಿಂತೆಗೆದುಕೊಳ್ಳುವ ಬಗ್ಗೆ.

**ಉಲ್ಲೇಖ:**
1) ದಾವಾ ಸಂಖ್ಯೆ: 902:91-92.
2) ಅಮಲ್ಜಾರಿ ಸಂಖ್ಯೆ: 1157:93-94.
3) ಈ ಕಛೇರಿಯ ಆದೇಶ ದಿನಾಂಕ: 8.4.99.
4) ಬ್ಯಾಂಕ್ ಮೇಲ್ವಿಚಾರಕರ ಪತ್ರದ ದಿನಾಂಕ: 17.12.2003.
5) ಈ ಕಛೇರಿಯ ಆದೇಶ ದಿನಾಂಕ: 17.1.2004.
6) ಮೈಲನಹಳ್ಳಿ ವ್ಯ.ಸೇ.ಸ. ಬ್ಯಾಂಕಿನ ವ್ಯವಸ್ಥಾಪಕರ ಪತ್ರದ ದಿನಾಂಕ: 11.10.2004.

**ಪ್ರಸ್ತಾವನೆ:**

ಶ್ರೀ ತಮ್ಮಪ್ಪ ಬಿನ್ ಅಜ್ಜಪ್ಪ ಕಸವಿಗೊಂಡನಹಳ್ಳಿ ಇವರು ಮೈಲನಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕಿನಲ್ಲಿ 1989-90ನೇ ಸಾಲಿನಲ್ಲಿ ರೂ.5400-00 ಗಳು ಸಾಲವನ್ನು ಪಡೆದಿದ್ದು ಸಕಾಲದಲ್ಲಿ ಮರುಪಾವತಿ ಮಾಡದ ಕಾರಣ ಸದರಿಯವರ ಸ್ಥಿರ ಆಸ್ತಿಯನ್ನು ಸಹಕಾರ ಸಂಘಗಳ ಕಾಯಿದೆ ಹಾಗೂ ನಿಯಮಗಳನ್ವಯ ಸಂಘದ ಹೆಸರಿಗೆ ವರ್ಗಾವಣೆ ಮಾಡಲಾಗಿತ್ತು. ದಿನಾಂಕ: 2.10.2003 ರಂದು ಸುಸ್ತಿ ಸಾಲವನ್ನು ಬಡ್ಡಿ ಸಮೇತ ಪೂರ್ಣವಾಗಿ ತೀರುವಳಿ ಮಾಡಿದ ನಂತರ ಆಡಳಿತ ಮಂಡಳಿಯವರ ತೀರ್ಮಾನ ಹಾಗೂ ಬ್ಯಾಂಕ್ ಮೇಲ್ವಿಚಾರಕರ ಶಿಫಾರಸ್ಸಿನ ಆಧಾರದ ಮೇಲೆ ಸಂಘದ ಹೆಸರಿಗೆ ವರ್ಗಾವಣೆಯಾಗಿದ್ದು ಸ್ಥಿರ ಆಸ್ತಿಯ ಆದೇಶವನ್ನು ಹಿಂದಕ್ಕೆ ಪಡೆದು ಉಲ್ಲೇಖ (5) ರಲ್ಲಿ ಆದೇಶವನ್ನು ಹೊರಡಿಸಲಾಗಿತ್ತು. ಸದರಿ ಆದೇಶದಲ್ಲಿ ಶ್ರೀ ತಮ್ಮಪ್ಪ ಬಿನ್ ಅಜ್ಜಪ್ಪ, ಕಸವಿಗೊಂಡನಹಳ್ಳಿ ಇವರ ಜಮೀನಿನ ವಿವರ ಎಕರೆ ಗುಂಟೆ 5-05 ಎಂದು ನಮೂದಿಸಲಾಗಿತ್ತು. ಆದರೆ ಸಂಘದ ವ್ಯವಸ್ಥಾಪಕರು ಉಲ್ಲೇಖ (6)ರ ಪತ್ರದಲ್ಲಿ ಮೂಲ ದಾಖಲಾತಿಗಳ ಪ್ರಕಾರ ಸದರಿಯವರು ಸ್ಥಿರ ಆಸ್ತಿ ಎಕರೆ ಗುಂಟೆ 6.05 ಖುಷ್ಕಿ ಜಮೀನು ಇದೆ ಎಂದು ಪತ್ರ ಬರೆದು ತಿದ್ದುಪಡಿ ಆದೇಶವನ್ನು ನೀಡಬೇಕೆಂದು ಉಲ್ಲೇಖ (6) ರಲ್ಲಿ ಕೋರಿರುತ್ತಾರೆ. ಸದರಿಯವರ ಮೂಲ ದಾಖಲಾತಿಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಶ್ರೀ ಬಿ. ಓಬನಾಯ್ಕ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು, ನಿಯಮ 441, ಚಿತ್ರದುರ್ಗ ಡಿಸಿಸಿ ಬ್ಯಾಂಕ್ ನಿ., ಚಿತ್ರದುರ್ಗ ಆದ ನಾನು ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿಕೊಂಡು ಸಹಕಾರ ಸಂಘಗಳ ನಿಯಮ 38(ಎ) (15) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:ಸಿಎಲ್‌ಎಂ:2001-2002, ದಿನಾಂಕ: 21.11.2001ರ ರೀತ್ಯಾ ಶ್ರೀ ತಮ್ಮಪ್ಪ ಬಿನ್ ಅಜ್ಜಪ್ಪ ಕಸವಿಗೊಂಡನಹಳ್ಳಿ, ಚಳ್ಳಕೆರೆ ತಾಲ್ಲೂಕು ಇವರ ಸರ್ವೆ ನಂ.69 ಎ.ಗು.5-05 ಖುಷ್ಕಿ ಜಮೀನನ್ನು ಈ ಕಛೇರಿಯ ಉಲ್ಲೇಖ (3) ರಲ್ಲಿ ಹೊರಡಿಸಲಾಗಿದ್ದ ವರ್ಗಾವಣೆ ಆದೇಶವನ್ನು ಉಲ್ಲೇಖ (5)ರ ಆದೇಶದಲ್ಲಿ ಹಿಂದಕ್ಕೆ ಪಡೆಯಲಾಗಿದ್ದು, ಉಲ್ಲೇಖ (5) ರಲ್ಲಿ ಹೊರಡಿಸಲಾಗಿದ್ದ ಆದೇಶ ಸ್ವತ್ತಿನ ವಿವರಗಳ ಬಗ್ಗೆ ಎಕರೆ ಗುಂಟೆ 5-05ರ ಬದಲಿಗೆ ಎ.ಗುಂಟೆ 6-05 ಎಂದು ತಿದ್ದುಪಡಿ ಆದೇಶವನ್ನು ಹೊರಡಿಸಲಾಗಿದೆ.

**ಸ್ವತ್ತಿನ ವಿವರ**

| ನಂ. | ತಾಲ್ಲೂಕು | ಗ್ರಾಮ | ಸರ್ವೆ ನಂ. | ವಿಸ್ತೀರ್ಣ ಎ.ಗುಂಟೆ | ತರಹೆ | ಡಿಕ್ರಿ ಬಾಕಿದಾರನ ಸ್ವತ್ತಿನ ಸ್ವಭಾವ |
|---|---|---|---|---|---|---|
| 1) | ಚಳ್ಳಕೆರೆ | ಕಸವಿಗೊಂಡನಹಳ್ಳಿ | 69ಪಿ | 6-05 | ಖುಷ್ಕಿ | ಶ್ರೀ ತಮ್ಮಪ್ಪ ಬಿನ್ ಅಜ್ಜಪ್ಪ, ಕಸವಿಗೊಂಡನಹಳ್ಳಿ, ಚಳ್ಳಕೆರೆ ತಾಲ್ಲೂಕು, ಒಟ್ಟು ಕುಟುಂಬದ ಆಸ್ತಿ |

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ,
ನಿ. 441, ಚಿತ್ರದುರ್ಗ ಡಿಸಿಸಿ ಬ್ಯಾಂಕ್ ನಿಯಮಿತ, ಚಿತ್ರದುರ್ಗ.

ಪಿ.ಆರ್. 1492

## DIRECTORATE OF ECONOMICS AND STATISTICS, GOVERNMENT OF KARNATAKA, BANGALORE-1

### Consumer Price Index Numbers for Industrial Workers

No. DES 24 PWX 2004
State: Karnataka
Base: 1987-88=100
Month: July 2004
Date : 29-09-2004

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Mysore | Raichur | Tumkur |
|---|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| I. | **FOOD:** | | | | | | | | | | | | |
| | (a) Cereals & Products | 331 | 381 | 374 | 353 | 348 | 337 | 343 | 343 | 278 | 376 | 341 | 350 |
| | (b) Pulses & Products | 293 | 294 | 314 | 343 | 296 | 281 | 300 | 301 | 286 | 292 | 302 | 307 |
| | (c) Oils & Fats | 256 | 255 | 252 | 266 | 275 | 257 | 285 | 301 | 274 | 276 | 273 | 250 |
| | (d) Meat, Fish & Eggs | 344 | 359 | 365 | 459 | 336 | 341 | 310 | 346 | 571 | 360 | 385 | 324 |
| | (e) Milk & Products | 343 | 241 | 315 | 313 | 306 | 267 | 252 | 341 | 289 | 257 | 307 | 281 |
| | (f) Condiments & Spices | 245 | 312 | 345 | 410 | 274 | 275 | 276 | 228 | 223 | 279 | 252 | 300 |
| | (g) Vegetables & Fruits | 253 | 277 | 298 | 382 | 308 | 306 | 319 | 311 | 226 | 271 | 223 | 474 |
| | (h) Other Food | 288 | 354 | 356 | 344 | 285 | 300 | 298 | 294 | 317 | 290 | 308 | 349 |
| | **FOOD GROUP** | 305 | 328 | 342 | 354 | 313 | 302 | 308 | 322 | 328 | 312 | 314 | 334 |
| II. | Pan, Supari, Tobacco & Intoxicants | 309 | 344 | 336 | 340 | 388 | 427 | 345 | 472 | 295 | 323 | 352 | 386 |
| III. | Fuel & Light | 305 | 312 | 270 | 451 | 280 | 312 | 344 | 329 | 271 | 308 | 364 | 291 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 255 | 253 | 224 | 373 | 283 | 238 | 331 | 381 | 242 | 292 | 402 | 209 |
| VI. | **MISCELLANEOUS:** | | | | | | | | | | | | |
| | (a) Medical Care | 566 | 466 | 370 | 293 | 282 | 267 | 381 | 319 | 336 | 295 | 394 | 219 |
| | (b) Education, Recreation & Amusement | 341 | 314 | 521 | 204 | 395 | 400 | 326 | 308 | 344 | 412 | 369 | 368 |

| 1 | | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|---|
| | (c) Transport & Communication | 348 | 391 | 328 | 333 | 595 | 347 | 347 | 559 | 347 | 413 | 388 | 370 |
| | (d) Personal Care & effects | 265 | 274 | 256 | 284 | 297 | 257 | 270 | 295 | 267 | 318 | 255 | 267 |
| | (e) Others | 320 | 345 | 282 | 422 | 290 | 264 | 279 | 282 | 235 | 297 | 402 | 246 |
| | Miscellaneous Group index | 361 | 331 | 333 | 306 | 345 | 300 | 310 | 310 | 294 | 351 | 350 | 283 |
| | **GENERAL INDEX** | 286 | 296 | 295 | 329 | 289 | 274 | 290 | 306 | 289 | 285 | 310 | 271 |
| | To convert to Base 1960 Multiply by Linking Factor. | 7.39 | 9.19 | 8.27 | ... | 8.26 | 8.56 | 9.25 | 7.92 | 9.31 | 9.05 | ... | ... |

ಜಂಟಿ ನಿರ್ದೇಶಕರು,

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಬೆಂಗಳೂರು.

**GOVERNMENT OF INDIA**
**MINISTRY OF LABOUR**
**LABOUR BUREAU**
**'Cleremount' Shimla-171004 Dated: 2nd September 2004**
**CONSUMER PRICE INDEX NUMBERS FOR INDUSTRIAL WORKERS**

State: Karnataka (Base: 1982=100) Month: July 2004

| Code | Group/Sub-group/Centre | | Bangalore | Belgaum | Hubli Dharwar | Mercara |
|---|---|---|---|---|---|---|
| 1000 | IA. | **FOOD:** | | | | |
| 1100 | | (a) Cereals & Products | 435 | 565 | 467 | 462 |
| 1200 | | (b) Pulses & Products | 526 | 500 | 552 | 545 |
| 1300 | | (c) Oils & Fats | 418 | 395 | 395 | 432 |
| 1400 | | (d) Meat, Fish & Eggs | 628 | 574 | 564 | 582 |
| 1500 | | (e) Milk & Products | 375 | 531 | 440 | 459 |
| 1600 | | (f) Condiments & Spices | 473 | 601 | 566 | 459 |
| 1700 | | (g) Vegetables & Fruits | 480 | 625 | 631 | 490 |
| 1800 | | (h) Other Food | 707 | 730 | 710 | 784 |
| 1000 | | **FOOD GROUP** | 507 | 576 | 535 | 531 |
| 2000 | I. | Pan, Supari, Tobacco & Intoxicants | 657 | 631 | 578 | 528 |
| 3000 | II. | Fuel & Light | 748 | 643 | 558 | 447 |
| 4000 | III. | Housing Index | 585 | 717 | 577 | 195 |
| 5000 | IV. | Clothing, Bedding & Footwear | 279 | 278 | 327 | 423 |
| 6000 | V. | **Miscellaneous:** | | | | |
| 6100 | | (a) Medical Care | 491 | 534 | 476 | 507 |
| 6200 | | (b) Education, Recreation & Amusement | 427 | 718 | 581 | 636 |
| 6300 | | (c) Transport & Communication | 581 | 450 | 576 | 614 |
| 6400 | | (d) Personal Care & effects | 488 | 443 | 504 | 461 |
| 6500 | | (e) Others | 495 | 564 | 443 | 470 |
| 6600 | | Miscellaneous Group | 493 | 531 | 503 | 510 |
| | | **GENERAL INDEX** | **501** | **572** | **529** | **494** |

ಜಂಟಿ ನಿರ್ದೇಶಕರು,

ಪಿ.ಆರ್. 1494 ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಕಾಪಕಾ:ಎಫ್:ಎಸ್ಆರ್-38:2004**

**ಅರ್ಜಿದಾರರು:** 1) ಶ್ರೀಮತಿ ಹೆಚ್.ಎ. ಶಾಂತ ಉರುಫ್ ಶಾಂತಮ್ಮ ಕೋಂ ಲೇಟ್ ವೈ.ಟಿ. ಜಗದೀಶ ಉರುಫ್ ಜಗನ್ನಾಥ್, 20 ವರ್ಷ.

2) ಚಿ: ವಿಶ್ವಾಸ್ ಬಿನ್ ಲೇಟ್ ವೈ.ಟಿ. ಜಗದೀಶ ಉರುಫ್ ಜಗನ್ನಾಥ್, 1 ವರ್ಷ.

3) ಶ್ರೀ ತಿಮ್ಮೇಗೌಡ ಬಿನ್ ಲೇಟ್ ಸಣ್ಣಕುಳ್ಳೇಗೌಡ, 65 ವರ್ಷ.

ವಾಸ: ಯಡಿಯೂರು ಗ್ರಾಮ, ಮಲ್ಲಿಪಟ್ಟಣ ಹೋಬಳಿ, ಅರಕಲಗೂಡು ತಾಲ್ಲೂಕು.

**ಪ್ರತಿವಾದಿಗಳು:** 1) ಶ್ರೀ ಸುಧೀರ್ ಎಸ್.ಆರ್. ಲಸ್ರಾಡೋ ಬಿನ್ ರೋಡಾಲ್ಫ್ ಲಸ್ರಾಡೋ, ಸಂತೂರು ಕೆಫೆ, ಕುಲಶೇಖರ ಅಂಚೆ, ಸಂತೂರು, ಮಂಗಳೂರು ಜಿಲ್ಲೆ.

2) ಬ್ರಾಂಚ್ ಮ್ಯಾನೇಜರ್, ಬ್ರಾಂಚ್ ಆಫೀಸ್-2, ಯುನೈಟೆಡ್ ಇಂಡಿಯಾ ಇನ್‌ಶ್ಯೂರೆನ್ಸ್ ಕಂಪನಿ ಲಿ., ಮಂಗಳೂರು.

3) ಡಿವಿಜನಲ್ ಮ್ಯಾನೇಜರ್, ಡಿವಿಜನಲ್ ಆಫೀಸ್, ಯುನೈಟೆಡ್ ಇಂಡಿಯಾ ಇನ್‌ಶ್ಯೂರೆನ್ಸ್ ಕಂ. ಲಿ., ರಾಮಭವನ ಕಾಂಪ್ಲೆಕ್ಸ್, ಕೋಡಿಯಾಲಬೈಲ್, ಮಂಗಳೂರು.

4) ಶ್ರೀಮತಿ ಸಿದ್ದಮ್ಮ, 60 ವರ್ಷ, ಯಡಿಯೂರು ಗ್ರಾಮ, ಮಲ್ಲಿಪಟ್ಟಣ ಹೋಬಳಿ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ವೈ.ಟಿ. ಜಗದೀಶ ಉರುಫ್ ಜಗನ್ನಾಥ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 17.1.2004 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.-

**ಹೆಚ್. ಗೋಪಾಲಗೌಡ**

ಪಿ.ಆರ್. 1493 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರ ಕಛೇರಿ, ವಿಜಾಪೂರ ಜಿಲ್ಲೆ
## ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ಕಾರಣ ಕೇಳುವ ನೋಟೀಸು
## ಪ್ರಕರಣ ಸಂಖ್ಯೆ: ಇಎಕ್ಸ್‌ಇ:ಬಿಜೆಪಿ:ಡಿಟಿಸಿಆರ್:131:2003-04, ದಿನಾಂಕ: 20ನೇ ಅಕ್ಟೋಬರ್ 2004

**ವಿಷಯ:** ಮೊಕದ್ದಮೆಯಲ್ಲಿ ಇಲಾಖೆಗೆ ವಶಪಡಿಸಿಕೊಂಡ ವಾಹನ ನಂ: ಕೆಎ:28:ಜೆ:6145 ವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂಬುದರ ಬಗ್ಗೆ.

ದಿನಾಂಕ: 29.1.2004 ರಂದು ಮುಳವಾಡ ತಾಂಡಾ ನಂ:2 ರಲ್ಲಿ ಪಿ.ಎಸ್.ಐ. ಮನಗೂಳಿ ಪೊಲೀಸ್ ಠಾಣೆ ಹಾಗೂ ಪೊಲೀಸ್ ಮತ್ತು ಅಬಕಾರಿ ಸಿಬ್ಬಂದಿಯವರು ಕೂಡಿಕೊಂಡು ಅಬಕಾರಿ ದಾಳಿ ಮಾಡಲು ಮುಳವಾಡ ಕೋಲಾರ ರಸ್ತೆ, ಮುಳವಾಡ ತಾಂಡಾ ನಂ:2 ನೇದ್ದರ ಕ್ರಾಸ್ ಸಮೀಪ ಬಂದಾಗ ತಾಂಡಾದಿಂದ ಮುಂಜಾನೆ 10.30 ಗಂಟೆಗೆ ಇಬ್ಬರು ಸುಜುಕಿ ಮೋಟಾರ್ ಸೈಕಲ್ ನಂಬರ್: ಕೆಎ:28:ಜೆ:6145ರ ಮೇಲೆ ಬರುತ್ತಿದ್ದರು. ಅಧಿಕಾರಿಗಳಿಗೆ ಸಂಶಯ ಬಂದು ಸದರಿ ಮೋಟಾರ್ ಸೈಕಲ್ ದವರಿಗೆ ನಿಲ್ಲಿಸಲು ಹೇಳಿದಾಗ ಕ್ರಾಸ್ ರೋಡ್ ಮೇಲೆ ಮೋಟಾರ್ ಸೈಕಲ್ ಬಿಟ್ಟು ಓಡಲು ಪ್ರಯತ್ನಿಸಿದಾಗ ಅವರನ್ನು ಹಿಡಿದು ತಪಾಸಣೆ ಮಾಡಿದಾಗ ಅಕ್ರಮವಾಗಿ ಸಾಗಿಸುತ್ತಿದ್ದ 10 ಲೀಟರ್‌ದಷ್ಟು ಕಳ್ಳಭಟ್ಟಿ ಸಾರಾಯಿ ತುಂಬಿದ 1 ಪ್ಲಾಸ್ಟಿಕ್ ಕ್ಯಾನು ಮತ್ತು 1 ಪ್ಲಾಸ್ಟಿಕ್ ಚೀಲದಲ್ಲಿ ಅಂದಾಜು 20 ಕೆ.ಜಿ. ಯಷ್ಟು ನವಸಾಗರ ಇರುವುದು ಪತ್ತೆ ಹಚ್ಚಿ ಅಬಕಾರಿ ಕಾಯ್ದೆ ಕಲಂಗಳ ಉಲ್ಲಂಘನೆಗಾಗಿ ಸ್ಥಳ ಪಂಚನಾಮೆ ಜರುಗಿಸಿ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಮನಗೂಳಿ ಪೊಲೀಸ್ ಠಾಣೆ ಇವರು ಕಳ್ಳಭಟ್ಟಿ ಸಾರಾಯಿ, ನವಸಾಗರ ಮತ್ತು ಸುಜುಕಿ ಮೋಟಾರ್ ಸೈಕಲ್ ಜಪ್ತು ಮಾಡಿ ಆರೋಪಿತರನ್ನು ಬಂಧಿಸಿ ಗುನ್ನೆ ನಂ:21:2004, ದಿನಾಂಕ: 29.1.2004 ರಂದು ದಾಖಲಿಸಿರುತ್ತಾರೆ. ನಂತರ ಸದರಿ ಗುನ್ನೆಯನ್ನು ದಿನಾಂಕ: 9.3.2004 ರಂದು ಅಬಕಾರಿ ಉಪ ನಿರೀಕ್ಷಕರು ಬ. ಬಾಗೇವಾಡಿ ಉಪವಲಯ ಇವರಿಗೆ ಹಸ್ತಾಂತರಿಸಿದ್ದು ಸದರಿ ಅಬಕಾರಿ ಉಪ ನಿರೀಕ್ಷಕರು ದಾಖಲಾತಿಗಳ ಪ್ರತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ. ವಶಪಡಿಸಿಕೊಂಡ ವಾಹನ ಸುಜುಕಿ ಮೋಟಾರ್ ಸೈಕಲ್ ನಂ: ಕೆಎ:28:ಜೆ:6145 ನ್ನು ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಿಸಲು ಉಪಯೋಗಿಸಿದ್ದು ಮೇಲ್ನೋಟಕ್ಕೆ ಈ ಪ್ರಾಧಿಕಾರಕ್ಕೆ ಕಂಡು ಬಂದಿರುತ್ತದೆ.

ವಾಹನದ ಮಾಲೀಕರಾದ ನಿಮಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಜಪ್ತಾದ ವಾಹನವು ನಿಮಗೆ ಸೇರಿರುವುದರಿಂದ ಮತ್ತು ಅಬಕಾರಿ ಕಾಯ್ದೆಯ ಉಲ್ಲಂಘನೆಯಾಗಿರುವುದರಿಂದ ನಿಮ್ಮ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ರೀತ್ಯಾ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಅಂತಾ ನೀಡಿದ ಕಾರಣ ಕೇಳುವ ನೋಟೀಸು. ನಿಮಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಮೊದಲು ಈ ವಿಷಯವಾಗಿ ದಿನಾಂಕ: 17.3.2004 ರಂದು ಮತ್ತು 26.7.2004 ರಂದು ಕಾರಣ ಕೇಳುವ ನೋಟೀಸು ನೀಡಲಾಗಿರುತ್ತದೆ. ಆದರೆ ತಾವುಗಳು ಯಾವುದೇ ತಕರಾರುಗಳಾಗಲೀ, ಹೇಳಿಕೆಗಳಾಗಲೀ ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲಾ. ದಿನಾಂಕ: 1.9.2004 ರಂದು ನಿಮಗೂ ಮತ್ತು ನಿಮ್ಮ ವಕೀಲರಾದ ಶ್ರೀ ಎ.ಕೆ. ಗಂಬೀಹಾಳ, ಸಾ: ಬ. ಬಾಗೇವಾಡಿ ಇವರಿಗೂ ನೋಟೀಸು ತೆಗೆಯಲಾಗಿ ಸದರಿ ನೋಟೀಸು ನಿಮಗೆ ದಿನಾಂಕ: 17.9.2004 ರಂದು ಹಾಗೂ ಶ್ರೀ ಎ.ಕೆ. ಗಂಬೀಹಾಳ, ವಕೀಲರು ಬ. ಬಾಗೇವಾಡಿ ಇವರಿಗೆ ದಿನಾಂಕ: 14.09.2004 ರಂದು ಜಾರಿಯಾಗಿದ್ದರೂ ಯಾವುದೇ ತಕರಾರುಗಳಾಗಲೀ ಅಥವಾ ಹೇಳಿಕೆಗಳಾಗಲೀ ಸಲ್ಲಿಸಲಾಗಿರುವುದಿಲ್ಲಾ ಆದರೂ ನೈಸರ್ಗಿಕ ನ್ಯಾಯದ ಹಿತ ದೃಷ್ಟಿಯಿಂದ ಈ ನೋಟೀಸನ್ನು ಮತ್ತೊಮ್ಮೆ ತೆಗೆಯಲಾಗಿದೆ. ಸದರಿ ಈ ನೋಟೀಸು ತಲುಪಿದ 15 ದಿನಗಳ ಒಳಗಾಗಿ ನಿಮ್ಮ ತಕರಾರುಗಳಾಗಲೀ ಹೇಳಿಕೆಗಳಾಗಲೀ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ಲಿಖಿತವಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ಪರಿಗಣಿಸಿ ಅಬಕಾರಿ ಕಾಯ್ದೆ 43(ಎ) ಅಡಿಯಲ್ಲಿ ನಿಮ್ಮ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಏಕಪಕ್ಷೀಯವಾಗಿ ಕ್ರಮ ಜರುಗಿಸಲಾಗುವುದು.

**ಕೆ.ಆರ್. ಗೌಡ್ರ**

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ವಿಜಾಪೂರ ಜಿಲ್ಲೆ, ವಿಜಾಪೂರ.

## ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರವರ ಕಛೇರಿ, ವಿಜಾಪೂರ
## ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ಕಾರಣ ಕೇಳುವ ನೋಟೀಸು
## ಸಂಖ್ಯೆ: ಇಎಕ್ಸ್‌ಇ:ಬಿಜೆಪಿ:ಡಿಟಿಸಿಆರ್:19:2004-05, ದಿನಾಂಕ: 18ನೇ ಅಕ್ಟೋಬರ್ 2004

**ವಿಷಯ:** ಅಬಕಾರಿ ಉಪ ನಿರೀಕ್ಷಕರು ಬ. ಬಾಗೇವಾಡಿ ಉಪವಲಯ ಇವರ ಗುನ್ನೆ ನಂ:2:2004-05, ದಿ: 8.9.2004 ರಂದು ವಶಪಡಿಸಿಕೊಂಡ ವಾಹನ ನಂಬರ್: ಸುಜುಕಿ ಮ್ಯಾಕ್ಸ್:100 ಮೋಟಾರ್ ಸೈಕಲ್ ನಂ: ಕೆಎ:28:ಹೆಚ್: 8873 ವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂಬುದರ ಬಗ್ಗೆ.

ದಿನಾಂಕ: 8.9.2004 ರಂದು ಬಿ. ಬಾಗೇವಾಡಿ ತಾಲ್ಲೂಕಿನ ತಳೇವಾಡ ಕ್ರಾಸ್ ಹತ್ತಿರ ಬೆಳಿಗ್ಗೆ 4.30 ಗಂಟೆಗೆ ವಾಹನ ಮ್ಯಾಕ್ಸ್:100 ಸುಜುಕಿ ಮೋಟಾರ್ ಸೈಕಲ್ ನಂ: ಕೆಎ:28:ಹೆಚ್:8873 ರಲ್ಲಿ ಅಕ್ರಮವಾಗಿ ಒಂದು ಪ್ಲಾಸ್ಟಿಕ್ ಕ್ಯಾನಿನಲ್ಲಿ ಅಂದಾಜು 5 ಲೀಟರ್ ಕಳ್ಳಭಟ್ಟಿ ಸಾರಾಯಿ ಮತ್ತು ಕಳ್ಳಭಟ್ಟಿ ಸಾರಾಯಿ ತುಂಬಿದ 48 ಪ್ಲಾಸ್ಟಿಕ್ ಪಾಕೀಟ್‌ಗಳನ್ನು ಒಂದು ಬಿಳಿ ಚೀಲದಲ್ಲಿ ಹಾಕಿಕೊಂಡು ಸಾಗಿಸುತ್ತಿರುವುದನ್ನು ಪತ್ತೆ ಹಚ್ಚಿ ಅಬಕಾರಿ ಕಾಯ್ದೆ ಕಲಂಗಳ ಉಲ್ಲಂಘನೆಗಾಗಿ ಸ್ಥಳ ಪಂಚನಾಮೆ ಜರುಗಿಸಿ ಅಬಕಾರಿ ಉಪ ನಿರೀಕ್ಷಕರು ಬ. ಬಾಗೇವಾಡಿ ಉಪವಲಯ ಇವರು ವಾಹನ ಮತ್ತು ಕಳ್ಳಭಟ್ಟಿ ಸಾರಾಯಿಯನ್ನು ಜಪ್ತು ಮಾಡಿ ಗುನ್ನೆ ನಂ:2:04-05, ದಿನಾಂಕ: 8.9.2004 ರಂದು ದಾಖಲಿಸಿಕೊಂಡು ದಾಖಲಾತಿಗಳ ಪ್ರತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿರುತ್ತಾರೆ. ಆರೋಪಿತರು ಯಾರು ಎಂಬುದು ಪತ್ತೆಯಾಗಿರುವುದಿಲ್ಲಾ. ವಶಪಡಿಸಿಕೊಂಡಿರುವ ವಾಹನ ನಂ: ಕೆಎ:28:ಹೆಚ್:8873ನ್ನು ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಿಸಲು ಉಪಯೋಗಿಸಿದ್ದು ಮೇಲ್ನೋಟಕ್ಕೆ ಈ ಪ್ರಾಧಿಕಾರಕ್ಕೆ ಕಂಡು ಬಂದಿರುತ್ತದೆ.

ವಾಹನದ ಮಾಲೀಕರಾದ ನಿಮಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಜಪ್ತಾದ ವಾಹನವು ನಿಮಗೆ ಸೇರಿರುವುದರಿಂದ ಮತ್ತು ಅಬಕಾರಿ ಕಾಯ್ದೆಯ ಉಲ್ಲಂಘನೆಯಾಗಿರುವುದರಿಂದ ನಿಮ್ಮ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಎ) ರೀತ್ಯಾ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಅಂತಾ ನೀಡಿದ ಕಾರಣ ಕೇಳುವ ನೋಟೀಸು. ಈ ನೋಟಿಸು ತಲುಪಿದ 15 ದಿನಗಳ ಒಳಗಾಗಿ ನಿಮ್ಮ ತಕರಾರುಗಳಾಗಲೀ ಹೇಳಿಕೆಗಳಾಗಲೀ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ಲಿಖಿತವಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ನಿಮ್ಮ ಹೇಳಿಕೆ ಏನು ಇಲ್ಲವೆಂದು ಪರಿಗಣಿಸಿ ಅಬಕಾರಿ ಕಾಯ್ದೆ ಕಲಂ 43(ಎ) ಅಡಿಯಲ್ಲಿ ನಿಮ್ಮ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಏಕಪಕ್ಷೀಯವಾಗಿ ಕ್ರಮ ಜರುಗಿಸಲಾಗುವುದು.

**ಕೆ.ಆರ್. ಗೌಡ್ರ**

ಪಿ.ಆರ್. 1495 ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ವಿಜಾಪೂರ ಜಿಲ್ಲೆ, ವಿಜಾಪೂರ.

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/150/ಡಿಟಿಸಿಆರ್/2000-2001, ದಿನಾಂಕ: 29ನೇ ಸೆಪ್ಟೆಂಬರ್ 2004**

**ಉಪಸ್ಥಿತರು:** ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದಿದಾರರು:** ಪೊಲೀಸ್ ಉಪ ನಿರೀಕ್ಷಕರು, ಮುಲ್ಕಿ ಪೊಲೀಸು ಠಾಣೆ, ಮುಲ್ಕಿ.

**ಆರೋಪಿಗಳು** 1. ಶ್ರೀ ಗಣೇಶ ಬಿ.ಯು, ಬಿನ್ ಜತ್ತಪ್ಪ, ಬಪ್ಪಡ ತಂಡ ಹೌಸ್, ಮುಕ್ಕಂದೂರು ಪೋಸ್ಟ್ ಮತ್ತು ಗ್ರಾಮ, ಕೊಡಗು ಜಿಲ್ಲೆ.
2. ಸದಾನಂದ ಆಳ್ವ, ಬಿನ್ ಜಯರಾಮ ಆಳ್ವ, ತೇವು ಹೌಸ್, ಪುದು ಗ್ರಾಮ, ಫರಂಗಿಪೇಟೆ, ಬಂಟ್ವಾಳ.

**ವಿರುದ್ಧ**

**ಅರ್ಜಿದಾರರು:** ಶ್ರೀ ಸದಾನಂದ ಆಳ್ವ ಬಿನ್ ಜಯರಾಮ ಆಳ್ವ, ತೇವು ಮನೆ, ಪುದು ಗ್ರಾಮ, ಪರಂಗಿಪೇಟೆ, ಬಂಟ್ವಾಳ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 10.11.2000 ಮಂಗಳೂರು ತಾಲ್ಲೂಕು ಕರ್ನಾಡು ಗ್ರಾಮದ ಬಸ್‌ಸ್ಟ್ಯಾಂಡ್ ಬಳಿ ಮಂಗಳೂರು ಉಡುಪಿ ರಾಜ್ಯ ರಸ್ತೆಯ ಬಲಭಾಗದಲ್ಲಿ ಕುರುಚಲು ಪೊದರುಗಳಿರುವ ಗುಡ್ಡ ಪ್ರದೇಶದಲ್ಲಿ ಅಕ್ರಮ ಸಾರಾಯಿ ದಾಸ್ತಾನು ಹೊಂದಿರುವ ಬಗ್ಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಪೊಲೀಸು ನಿರೀಕ್ಷಕರು, ದ.ಕ.ಜಿಲ್ಲಾ ಅಪರಾಧ ಪತ್ತೆ ದಳ ಹಾಗೂ ತಮ್ಮ ಸಿಬ್ಬಂದಿಯವರೊಂದಿಗೆ ಸದರಿ ಸ್ಥಳಕ್ಕೆ ದಾಳಿ ನಡೆಸಿದಾಗಿ ಕೆಲವು ಪಾಲಿಥೀನ್ ಚೀಲದೊಂದಿಗೆ ಇಬ್ಬರು ವ್ಯಕ್ತಿಗಳು ನಿಂತಿದ್ದು ಸದರಿ ವ್ಯಕ್ತಿಗಳಲ್ಲಿ ವಿಚಾರಿಸಿದಾಗ ಪಾಲಿಥೀನ್ ಮೂಟೆಗಳು ತಮ್ಮದೆಂದು, ಇದರಲ್ಲಿ ಹೊಗ್ಗೆ ತುಂಬಿಸಿರುವುದು ಎಂದು ತಿಳಿಸಿರುತ್ತಾರೆ. ಸಂಶಯದಿಂದ ಕೂಲಂಕುಷವಾಗಿ ವಿಚಾರಿಸಲಾಗಿ ಪಾಲಿಥೀನ್ ಚೀಲಗಳಲ್ಲಿ ಸಾರಾಯಿ ತುಂಬಿದ ಪ್ಯಾಕೇಟ್‌ಗಳನ್ನು ಮಾರಾಟಕ್ಕೋಸ್ಕರ ಕೊಂಡುಹೋಗಲು ವಾಹನಕ್ಕಾಗಿ ಕಾಯುತ್ತಿರುವುದು ಎದು ತಿಳಿಸಿರುತ್ತಾರೆ. ಸಾರಾಯಿ ತುಂಬಿದ ಪ್ಯಾಕೆಟ್‌ಗಳ ಮೂಟೆಗಳಿಗೆ ಯಾವುದೇ ಪರವಾನಿಗೆ ಹಾಗೂ ದಾಖಲಾತಿಗಳನ್ನು ಹಾಜರುಪಡಿಸಿರುವುದಿಲ್ಲ. ಸದರಿ ಇಬ್ಬರು ವ್ಯಕ್ತಿಗಳನ್ನು ವಿಚಾರಿಸಲಾಗಿ ಒಬ್ಬ ಗಣೇಶ ಬಿ.ಯು. ಬಿನ್ ಜತ್ತಪ್ಪ, ಬಪ್ಪಡ ತಂಡ ಮನೆ, ಮುಕ್ಕಂದೂರು ಗ್ರಾಮ ಮತ್ತು ಅಂಚೆ, ಕೊಡಗು ಇನ್ನೊಬ್ಬನ ಹೆಸರು ಶ್ರೀ ಸದಾನಂದ ಆಳ್ವ ಬಿನ್ ಜಯರಾಂ ಆಳ್ವ, ತೇವು ಮನೆ, ಪುದುಗ್ರಾಮ, ಪರಂಗಿಪೇಟೆ ಎಂದು ತಿಳಿಸಿರುತ್ತಾರೆ. ಸದರಿ ಸಾರಾಯಿ ತೊಟ್ಟೆಗಳನ್ನು ದಾಸ್ತಾನು ಇಟ್ಟಿರುವ ಬಗ್ಗೆ ಯಾವುದೇ ದಾಖಲಾತಿಗಳು ಇಲ್ಲದೆ ಇರುವ ಕಾರಣ ಇದು ಕರ್ನಾಟಕ ಅಬಕಾರಿ ಕಾಯ್ದೆಯನ್ವಯ ಅಪರಾಧವಾಗಿರುವುದರಿಂದ, ಸದರಿ ಸಾರಾಯಿ ತುಂಬಿದ ಪಾಲಿಥೀನ್ ಚೀಲಗಳನ್ನು ವಶಪಡಿಸಿಕೊಂಡು ಅವುಗಳ ವಿವರಗಳು ಈ ಕೆಳಗಿನಂತಿರುತ್ತದೆ.

100 ಎಂಎಲ್‌ನ ಸಾರಾಯಿ ತುಂಬಿದ 500 ರಷ್ಟು ಸ್ಯಾಚೆಟ್‌ಗಳಿದ್ದ ಪಾಲಿಥೀನ್ ಚೀಲಗಳು 7 ಒಟ್ಟು 3,500 ಸಾರಾಯಿ ತೊಟ್ಟೆಗಳು, ಪ್ರತಿಯೊಂದು ಪಾಲಿಥೀನ್ ಚೀಲದಿಂದ ಒಂದೊಂದು ಪ್ಯಾಕೇಟು ಸಾರಾಯಿ ಸ್ಯಾಚೆಟ್‌ಗಳನ್ನು ತೆಗೆದುಕೊಂಡು ಮಾದರಿಗಾಗಿ ಒಂದು ಡಬ್ಬದಲ್ಲಿ ತುಂಬಿ ಬಿಳಿ ಬಟ್ಟೆಯಿಂದ ಸುತ್ತಿ ಡಿ.ಸಿ.ಬಿ. ಎಂದು ಸೀಲು ಮಾಡಿರುತ್ತಾರೆ. ಸದರಿ ಸೊತ್ತುಗಳನ್ನು ಹಾಗೂ ಇಬ್ಬರು ವ್ಯಕ್ತಿಗಳನ್ನು ದಸ್ತಗಿರಿ ಮಾಡಿ ಮಹಜರನ್ನು ದಿನಾಂಕ: 10.11.2000 ರಂದು 12 ಘಂಟೆಗೆ ಸ್ಥಳದಲ್ಲೇ ಬರೆದು ಇವರ ವಿರುದ್ದ ಮೊಕದ್ದಮೆ ಸಂಖ್ಯೆ:114/2000 ರಂದು ಮೊಕದ್ದಮೆ ದಾಖಲಿಸಿರುತ್ತಾರೆ.

ದಿನಾಂಕ: 12.11.2000 ರಂದು ಮಂಗಳೂರು ತಾಲ್ಲೂಕು ಕಾರ್ನಾಡು ಗ್ರಾಮದ ಕಾರ್ನಾಡು ಬಸ್‌ಸ್ಟಾಪ್ ಬಳಿ ಮಂಗಳೂರು ಉಡುಪಿ ರಸ್ತೆಯ ಹೆದ್ದಾರಿಯ ಪೂರ್ವಕ್ಕೆ ಮುಲ್ಕಿ ಬೈಪಾಸ್ ರಸ್ತೆ ಬಳಿ ಬಸ್‌ಸ್ಟಾಪ್‌ನ ಹಿಂದುಗಡೆ ಮೋಟಾರ್ ಸೈಕಲನ್ನು ಕಾರ್ನಾಡು ಬಳಿ ಬಿಟ್ಟು ಹೋಗಿರುವುದಾಗಿ ದೊರೆತ ಖಚಿತ ವರ್ತಮಾನದ ಮೇರೆಗೆ ದ.ಕ. ಜಿಲ್ಲಾ ಅಪರಾಧ ಪತ್ತೆ ದಳದ ಪೊಲೀಸ್ ನಿರೀಕ್ಷಕರು ತಮ್ಮ ಸಿಬ್ಬಂದಿಯವರೊಂದಿಗೆ ಸದ್ರಿ ಸ್ಥಳಕ್ಕೆ ದಾಳಿ ನಡೆಸಿದಾಗ ಬಸ್‌ಸ್ಟಾಪ್‌ನ ಹಿಂದುಗಡೆ ಕಮ್ಯೂನಿಸ್ಟ್ ಕುರುಚಲು ಪೊದೆಗಳ ಮಧ್ಯೆ ನಿಲ್ಲಿಸಿದ್ದ ಕಪ್ಪು ಬಣ್ಣದ ಸುಜುಕಿ ಫಿಯೇರಾ ಮೋಟಾರು ಸೈಕಲ್ ಸಂಖ್ಯೆ: ಕೆಎ-19 ಎಲ್ 2026 ಆಗಿದ್ದು ಇದನ್ನು ಅಕ್ರಮವಾಗಿ ಸಾರಾಯಿ ತೊಟ್ಟೆಗಳ ಸಾಗಾಣಿಕೆಗೆ ಬಳಕೆಯಾಗುತ್ತಿತ್ತು ಎಂಬುದಾಗಿ ದೊರೆತ ಖಚಿತ ವರ್ತಮಾನದ ಮೇರೆಗೆ ಮುಂದಿನ ಕ್ರಮದ ಬಗ್ಗೆ ಮೋಟಾರು ಸೈಕಲನ್ನು ಸ್ವಾಧೀನಪಡಿಸಿಕೊಂಡಿರುತ್ತಾರೆ. ಮಹಜರನ್ನು ದಿನಾಂಕ: 12.11.2000 ರಂದು 12.15 ಗಂಟೆಗೆ ಸ್ಥಳದಲ್ಲೇ ಬರೆದು ಪಂಚರ ಸಹಿ ಪಡೆದುಕೊಂಡಿರುತ್ತಾರೆ. ಸದರಿ ಸೊತ್ತುಗಳನ್ನು ಹಾಗೂ ದಾಖಲಾತಿಗಳನ್ನು ಮುಲ್ಕಿ ಪೊಲೀಸ್ ಠಾಣೆಯ ಉಪ ನಿರೀಕ್ಷಕರು ದಿನಾಂಕ: 14.11.2000 ರಂದು ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿ, ಈ ಪ್ರಾಧಿಕಾರದ ಆದೇಶದ ಪ್ರಕಾರ ವಲಯ ಅಬಕಾರಿ ನಿರೀಕ್ಷಕರು, ಸುರತ್ಕಲ್ ರವರಿಗೆ ಮುಂದಿನ ಸೂಕ್ತ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ.

ವಾಹನ ಮಾಲೀಕರಾದ ಶ್ರೀ ಸದಾನಂದ ಆಳ್ವರವರು ತಮ್ಮ ವಕೀಲರ ಮೂಲಕ ದಿನಾಂಕ: 29.12.2000 ರಂದು ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ, ಸದರಿ ವಾಹನವನ್ನು ತನಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಅರ್ಜಿ ಸಲ್ಲಿಸಿರುವುದರಿಂದ, ಈ ಪ್ರಾಧಿಕಾರದ ಮಧ್ಯಂತರ ಆದೇಶ ಎಸ್‌ಡಿಕೆ:150:ಡಿಟಿಸಿಆರ್:2000-01, ದಿನಾಂಕ: 8.2.2001 ರಂದು ರೂ.13,500/- ಬ್ಯಾಂಕ್ ಗ್ಯಾರಂಟಿ ಹಾಗೂ ಸಮಾನಾಗಿ ಒಬ್ಬ ಜಮೀನ್ದಾರರನ್ನು ನೀಡಿರುವ ಮೇರೆಗೆ ಈ ಪ್ರಾಧಿಕಾರವು ವಶಪಡಿಸಿಕೊಂಡ ಮೋಟಾರು ಸೈಕಲ್ ಸಂಖ್ಯೆ: ಕೆಎ-19 ಎಲ್-2026ನ್ನು ಅರ್ಜಿದಾರರ ವಶಕ್ಕೆ ಕೆಲವು ಷರತ್ತುಗಳನ್ವಯ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲಾಗಿರುತ್ತದೆ. ಈ ಪ್ರಾಧಿಕಾರವು ದಿನಾಂಕ: 10.8.2001 ರಂದು ಅರ್ಜಿದಾರರಿಗೆ ನೀಡಿದ ಕಾರಣ ಕೇಳಿ ನೋಟೀಸಿಗೆ, ಅರ್ಜಿದಾರರು ದಿನಾಂಕ: 21.8.2001 ರಂದು ತಾನು ಮೊಕದ್ದಮೆಯಲ್ಲಿ ಭಾಗಿಯಾಗಿರುವುದಿಲ್ಲ. ಹಾಗೂ ತನ್ನ ಮೋಟಾರು ಸೈಕಲ್ ಸಾರಾಯಿ ತೊಟ್ಟೆಗಳ ಸಾಗಾಣಿಕೆಗೆ ಬಳಸಿರುವುದಿಲ್ಲ. ವಶಪಡಿಸಿಕೊಂಡ ಸಾರಾಯಿ ತೊಟ್ಟೆಗಳಿಗೂ ಹಾಗೂ ತನಗೂ ಯಾವುದೇ ಸಂಬಂಧ ಇರುವುದಿಲ್ಲ. ಇದು ತನ್ನ ಮೇಲೆ ಸುಳ್ಳು ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲಾದ ವಾಹನವನ್ನು ತನಗೆ ಶಾಶ್ವತ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತವೆ.

1. ಮೊದಲನೇ ವಿವಾದಾಂಶ: ದಿನಾಂಕ: 10.11.2000 ಮತ್ತು 12.11.2000 ರಂದು ಸುಜುಕಿ ಫಿಯೇರಾ ಮೋಟಾರು ಸೈಕಲ್ ಸಂಖ್ಯೆ: ಕೆಎ-19 ಎಲ್-2026 ರಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಅಬಕಾರಿ ಕಾಯ್ದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2. ಎರಡನೇಯ ವಿವಾದಾಂಶ: ಸದರಿ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆಯಾಗಿರುವುದರ ಬಗ್ಗೆ ತಮಗೆ ಅರಿವಿಲ್ಲದಂತೆ ಮತ್ತು ತಾವು ಶಾಮೀಲಾಗದೇ ನಡೆದಿದೆ ಹಾಗೂ ಇದರ ಬಗ್ಗೆ ತಾವೆಲ್ಲರು ಸಾಕಷ್ಟು ಮುಂಜಾಗ್ರತಾ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿ ಮತ್ತು ವಾಹನ ಮಾಲೀಕರು ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ ಅಥವಾ ಇಲ್ಲವೇ?
3. ಮೂರನೆಯ ವಿವಾದಾಂಶ: ವಾಹನ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

**ಮೊದಲನೇ ವಿವಾದಾಂಶಕ್ಕೆ ಉತ್ತರ : ನಕಾರಾತ್ಮಕ (ಇಲ್ಲ).**

ಪ್ರಾಸಿಕ್ಯೂಷನ್ ಪರ ಮುಖ್ಯ ಸಾಕ್ಷಿಯಾಗಿ ಫಿರ್ಯಾದುದಾರರಾದ (ಪ್ರಾಸಿಕ್ಯೂಷನ್ ನಂ.2) ಶ್ರೀ ಹೆಚ್.ಡಿ. ಮಂಡೋನ್ಸನ್ ಪೊಲೀಸ್ ನಿರೀಕ್ಷಕರು ಸ್ಟೇಟ್ ಇಂಟೆಲಿಜೆನ್ಸ್, ಬೆಂಗಳೂರು ದಿನಾಂಕ: 19.5.2004 ರಂದು ಪ್ರಾಧಿಕಾರದ ಮುಂದೆ ಹಾಜರಾಗಿ ಎಡಿಪಿಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ ದಿನಾಂಕ: 10.11.2000 ರಂದು ಬೆಳಿಗ್ಗೆ 10.00 ಗಂಟೆಗೆ ಅಪರಿಚಿತ ವ್ಯಕ್ತಿಯಿಂದ ಫೋನ್ ಕರೆ ಬಂದಿದ್ದು ಮಂಗಳೂರು ತಾಲ್ಲೂಕು ಕಾರ್ನಾಡು ಗ್ರಾಮದ ಬಸ್‌ಸ್ಟಾಪ್ ಬಳಿ ಇಬ್ಬರು ವ್ಯಕ್ತಿಗಳು ಪಾಲಿಥಿನ್ ಚೀಲಗಳ ಮೂಟೆಗಳನ್ನು ಇಟ್ಟುಕೊಂಡು ಸದರಿ ಸ್ಥಳಕ್ಕೆ ತಮ್ಮ ಸಿಬ್ಬಂದಿಯವರೊಂದಿಗೆ ದಾಳಿ ನಡೆಸಿದಾಗ, ಬಸ್‌ಸ್ಟಾಪ್‌ನ ಕುರುಚಲು ಗಿಡದ ಹತ್ತಿರ ಮೂಟೆಗಳನ್ನು ಇಟ್ಟುಕೊಂಡು ಇಬ್ಬರು ವ್ಯಕ್ತಿಗಳು ನಿಂತಿದ್ದು, ಮೂಟೆಗಳ ಬಗ್ಗೆ ವಿಚಾರಿಸಿದಾಗ ಅದು ಹ್ಯೊಗೆ ಎಂದು ತಿಳಿಸಿದ್ದು, ಸಂಶಯದ ಮೇರೆಗೆ ಕೂಲಂಕುಷವಾಗಿ ಪರಿಶೀಲಿಸಲಾಗಿ ಸಾರಾಯಿ ತೊಟ್ಟೆಗಳು ತುಂಬಿದ ಪ್ಯಾಕೆಟ್‌ಗಳಿದ್ದು ಅವುಗಳನ್ನು ಮಾರಾಟ ಮಾಡಲು ವಾಹನಕ್ಕೆ ಕಾಯುತ್ತಿದ್ದು ಎಂದು ತಿಳಿಸಿರುತ್ತಾರೆ. ಅವುಗಳ ಬಗ್ಗೆ ಪರವಾನಿಗೆ ಅಥವಾ ದಾಖಲೆ ಇಲ್ಲವೆಂದು ವಿಚಾರಣೆಯಲ್ಲಿ ತಿಳಿದು ಬರುತ್ತದೆ. ಆರೋಪಿಗಳ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಗಣೇಶ್ ಮತ್ತು ಸದಾನಂದ ಆಳ್ವ ಎಂದು ತಿಳಿದು ಬರುತ್ತದೆ. ಸದರಿ ಸಾರಾಯಿ ತೊಟ್ಟೆಗಳನ್ನು ಪರಿಶೀಲಿಸಿದಾಗ 7 ಗೋಣಿ ಚೀಲಗಳಲ್ಲಿ ತಲಾ 100 ಎಂ.ಎಲ್.ನ 500 ಸಾರಾಯಿ ತೊಟ್ಟೆಗಳಿದ್ದು ಒಟ್ಟು 3,500 ಸಾರಾಯಿ ತೊಟ್ಟೆಗಳು ಇರುವುದು ಕಂಡು ಬಂತು. ಮಾದರಿಗಾಗಿ 7 ಸಾರಾಯಿ ಸ್ಯಾಚೆಟ್‌ಗಳನ್ನು ತೆಗೆದು ಸೀಲ್ ಮಾಡಿರುತ್ತಾರೆ. ಪಂಚರ ಸಮಕ್ಷಮ ಸಹಿಯನ್ನು ಪಡೆದು ಮಹಜರನ್ನು ಸ್ಥಳದಲ್ಲೇ ಬರೆದಿರುತ್ತಾರೆ. ಘಟನೆ ನಡೆದ ಸ್ಥಳವು ಮುಲ್ಕಿ ಪೊಲೀಸ್ ಠಾಣೆಯ ಸರಹದ್ದಾಗಿದ್ದು, ಮುಂದಿನ ತನಿಖೆಗೋಸ್ಕರ ಸದರಿ ಸೊತ್ತುಗಳನ್ನು, ಆರೋಪಿಗಳನ್ನು ಹಾಗೂ ಮಹಜರನ್ನು ಮುಲ್ಕಿ ಪೊಲೀಸ್ ಠಾಣೆ ಅಧಿಕಾರಿಗಳಿಗೆ ಒಪ್ಪಿಸಿರುತ್ತಾರೆ. ದಿನಾಂಕ: 12.11.2000 ರಂದು ಕಪ್ಪು ಬಣ್ಣದ ಸುಜುಕಿ ಫಿಯೋರಾವನ್ನು ತಕ್ಷೀರಿ ಸ್ಥಳದಿಂದ ಸ್ವಲ್ಪ ದೂರ ಇದ್ದು, ಆರೋಪಿಗಳು ಬಳಸಿದ ಮೋಟಾರು ಸೈಕಲನ್ನು ಪಂಚರ ಸಮಕ್ಷಮ ವಶಪಡಿಸಿಕೊಂಡು ಠಾಣೆಗೆ ಹಸ್ತಾಂತರಿಸಿರುತ್ತಾರೆ. ದಿನಾಂಕ: 10.11.2000 ರಂದು ಮುಲ್ಕಿ ಠಾಣೆಗೆ ಸಲ್ಲಿಸಿದ ವರದಿ ಮೂಲ ಪ್ರತಿ ನ್ಯಾಯಾಲಯದಲ್ಲಿದ್ದು ಅದರ ಛಾಯಾ ಪ್ರತಿಯನ್ನು ನಿಶಾನೆ ಪಿ-2, ಅದರ ಸಹಿಯನ್ನು ನಿಶಾನೆ ಪಿ-2ಎ ಮತ್ತು ಸೊತ್ತು ಸ್ವಾಧೀನ ಛಾಯಾ ಪ್ರತಿಯನ್ನು ನಿಶಾನೆ ಪಿ-3, ಅದರ ಸಹಿಯನ್ನು ನಿಶಾನೆ ಪಿ-3ಎ, ಮಹಜರ್‌ನ ಛಾಯ ಪ್ರತಿಯನ್ನು ನಿಶಾನೆ ಪಿ-4, ಅದರ ಮೇಲಿನ ಸಹಿಯನ್ನು ನಿಶಾನೆ ಪಿ-4ಎ, ವಾಹನ ಜಪ್ತಿಪಡಿಸಿದ ಬಗ್ಗೆ ಸಲ್ಲಿಸಿದ ವರದಿ ನಿಶಾನೆ ಪಿ-5 ಮತ್ತು ಅದರ ಸಹಿಯನ್ನು ನಿಶಾನೆ ಪಿ-5ಎ ಮತ್ತು ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ-6 ಮತ್ತು ಅದರ ಸಹಿಯನ್ನು ನಿಶಾನೆ ಪಿ-6ಎ ಹಾಗೂ ಕರ್ನಾಟಕ ಅಬಕಾರಿ ಅಧಿನಿಯಮ ಕಲಂ 43 ರಡಿಯಲ್ಲಿ ಪೊಲೀಸ್ ಉಪ ನಿರೀಕ್ಷಕರು, ಮುಲ್ಕಿರವರು ಅಬಕಾರಿ ಅಧೀಕ್ಷಕರಿಗೆ ಸಲ್ಲಿಸಿದ ವರದಿಯನ್ನು ನಿಶಾನೆ ಪಿ-7 ಮತ್ತು ಅದರ ಸಹಿಯನ್ನು ನಿಶಾನೆ ಪಿ-7ಎ ಎಂದು ಗುರುತಿಸಿರುತ್ತಾರೆ.

ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಘಟನೆ ನಡೆದ ಸ್ಥಳವು ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ತಾಲ್ಲೂಕಿನ ಅಧಿಕಾರ ವ್ಯಾಪ್ತಿಗೆ ಇರುತ್ತದೆ. ತಕ್ಷೀರಿ ಸ್ಥಳ ಕಾರ್ನಾಡು ದಕ್ಷಿಣ ಕನ್ನಡ ಜಿಲ್ಲೆ ವ್ಯಾಪ್ತಿಯಲ್ಲಿದ್ದು ತಕ್ಷೀರು ಸ್ಥಳಕ್ಕೆ ಹೋಗುವ ಮೊದಲು ಸರಹದ್ದಿನ ಪೊಲೀಸ್ ಠಾಣೆಗೆ ತಿಳಿಸುವ ಅವಶ್ಯಕತೆ ಕಾನೂನಿನಲ್ಲಿ ಇಲ್ಲವೆಂದು ಈ ಪ್ರಕರಣಕ್ಕೆ ಸಂಬಂಧಿಸಿದ ಖಚಿತ ಮಾಹಿತಿಕೊಟ್ಟವರು ಎ.ಜೆ. ಶೆಟ್ಟಿ ಅಬಕಾರಿ ಕಂಪೆನಿಯೆಂದರೆ ಸರಿಯಲ್ಲ ಎಂದು ನುಡಿದಿರುತ್ತಾರೆ. ಸದರಿ ಸ್ಥಳದಲ್ಲಿ ಬಸ್‌ಸ್ಟಾಪ್‌ನಲ್ಲಿ ಸ್ವಲ್ಪ ಜನರಿದ್ದರೆ ಹಾಗೂ ತಕ್ಷೀರು ಸ್ಥಳದಿಂದ ಒಂದು ಅಂಬಾಸಿಡರ್ ಕಾರು ಎ.ಜೆ. ಶೆಟ್ಟಿ ಕಂಪೆನಿಗೆ ಸೇರಿದೆಯೆಂದರೆ ಸರಿಯಲ್ಲ ಎಂದು ನುಡಿದಿರುತ್ತಾರೆ. ಕಾರಿನಲ್ಲಿ ಅಕ್ರಮ ಸಾರಾಯಿ ಇದ್ದು 2 ದಿವಸದ ನಂತರ ಪಣಂಬೂರು ಎ.ಎಸ್.ಪಿ. ಮತ್ತು ಜಂಟಿಯಾಗಿ ಎ.ಜೆ.ಶೆಟ್ಟಿ ಕಂಪೆನಿಗೆ ದಾಳಿ ನಡೆಸಿದ್ದಾರೆ ಎಂದರೆ ಇದು ಪ್ರಕರಣಕ್ಕೆ ಸಂಬಂಧ ಇಲ್ಲವೆಂದು ನುಡಿದಿರುತ್ತಾರೆ. ದಿನಾಂಕ: 10.11.2000 ರಂದು ತಕ್ಷೀರು ಸ್ಥಳದ ಹತ್ತಿರ ಯಾವುದೇ ವಾಹನ ಇರಲಿಲ್ಲ. ಪ್ರಕರಣಕ್ಕೆ ಸಂಬಂಧಿಸಿ ಎರಡು ದಿನಗಳ ನಂತರ ಘಟಕದ ಸ್ಥಳದಿಂದ 15-20 ಅಡಿ ದೂರದಿಂದ ವಶಪಡಿಸಿಕೊಂಡಿರುತ್ತಾರೆ. ವಾಹನವನ್ನು ವಶಪಡಿಸಿದ ಸಮಯದಲ್ಲಿ, ವಾಹನದಲ್ಲಿ ಅಥವಾ ಹತ್ತಿರ ಸ್ಥಳದಲ್ಲಿ ಯಾವುದೇ ಅನಧಿಕೃತ ಮದ್ಯ ದೊರೆಯಲಿಲ್ಲ. ದಿನಾಂಕ: 10.11.2000 ರಂದು ಬಂಧಿಸಿದ ಆರೋಪಿಗಳ ಹೇಳಿಕೆ ಪಡೆದುಕೊಂಡಿರುವುದಿಲ್ಲ. ವಶಪಡಿಸಿಕೊಂಡ ಸಾರಾಯಿಗೂ ಹಾಗೂ ಬೈಕಿಗೆ ಮತ್ತು ವಾಹನ ಮಾಲೀಕರಿಗೂ ಯಾವುದೇ ರೀತಿಯ ಸಂಬಂಧ ಇರುವುದಿಲ್ಲ. ಆರ್.ಸಿ. ಮಾಲೀಕರ ವಿರುದ್ಧ ಸುಳ್ಳು ಮೊಕದ್ದಮೆ ದಾಖಲಿಸಿರುತ್ತಾರೆ ಎಂದು ಸಾರಾಯಿ ತೊಟ್ಟೆಗಳನ್ನು ವಶಪಡಿಸಿಕೊಂಡ ಸಂದರ್ಭದಲ್ಲಿ ಮೋಟಾರು ಬೈಕನ್ನು ವಶಪಡಿಸಿಕೊಳ್ಳಲಿಲ್ಲ ಎಂಬ ಅಂಶ ಸತ್ಯಕ್ಕೆ ದೂರವೆಂದು ನುಡಿದಿರುತ್ತಾರೆ.

ದಿನಾಂಕ: 28.1.2004 ರಂದು ಕೆಮಿಕಲ್ ಕ್ಯಾರಿಯರ್‌ರಾದ ಶ್ರೀ ನವೀನ್ ಕುಮಾರ್, ಅಬಕಾರಿ ರಕ್ಷಕ, ಸುರತ್ಕಲ್ ವಲಯರವರು ದಿನಾಂಕ: 15.12.2000 ರಂದು ಮೊಕದ್ದಮೆಗೆ ಸಂಬಂಧಿಸಿದ 100 ಎಂ.ಎಲ್.ನ 7 ಸಾರಾಯಿ ಸ್ಯಾಚೆಟ್‌ಗಳನ್ನು ಸುರತ್ಕಲ್ ವಲಯ ಕಛೇರಿಯಿಂದ ರಾಸಾಯನಿಕ ಕೆಮಿಕಲ್ ಮಂಗಳೂರಿಗೆ ಕಳುಹಿಸಿದ್ದು, ಅವರಿಂದ ದಿನಾಂಕ: 23.12.2000 ರಂದು ಸುರತ್ಕಲ್ ವಲಯ ಕಛೇರಿಗೆ ತಲುಪಿಸಿರುತ್ತೇನೆ. ಕೆಮಿಕಲ್ ವರದಿಯ ಛಾಯಾ ಪ್ರತಿಯನ್ನು ನಿಶಾನೆ ಪಿ-1 ಎಂದು ಗುರುತಿಸಲಾಗಿದೆ. ಅರ್ಜಿದಾರರ ಪರ ವಕೀಲರು ಪಾಟೀ ಸವಾಲಿಗೆ ಉತ್ತರಿಸುತ್ತಾ ದೋಷಾ ಆರೋಪಣಾ ಪಟ್ಟಿ ಸಲ್ಲಿಸಿದ ವಿಷಯ ತನಗೆ ಗೊತ್ತಿಲ್ಲ. ತಜ್ಞರು ಪರಿಶೀಲಿಸಿದ ಮಾದರಿ ಸ್ಯಾಚೆಟ್‌ಗಳನ್ನು ತಾನು ತಜ್ಞರಿಂದ ಕಛೇರಿಗೆ ತಲುಪಿಸಿರುವ ಸಮಯದಲ್ಲಿ ಪಿಂಟೋರವರು ಇದ್ದರು, ಹಾಗೂ ಮಾದರಿ ಸ್ಯಾಚೆಟ್‌ಗಳನ್ನು ಪಡೆದುಕೊಂಡು ತಜ್ಞರಿಗೆ ತಲುಪಿಸಿಲ್ಲ ಎಂದರೆ ಸರಿಯಲ್ಲ ಎಂದು ನುಡಿದಿರುತ್ತಾರೆ.

ಪ್ರಾ.ಸಾ. ನಂ:1 ಇವರು ಮುಖ್ಯ ವಿಚಾರಣೆಯಲ್ಲಿ ದಿನಾಂಕ: 10.11.2000 ರಂದು ದಾಖಲಿಸಿದ ಮೊಕದ್ದಮೆಯಲ್ಲಿ ಹಾಗೂ ತಕ್ಷೀರು ಸ್ಥಳದಲ್ಲಿ ಯಾವುದೇ ವಾಹನ ಇರಲಿಲ್ಲ, 2 ದಿನಗಳ ನಂತರ ವಶಪಡಿಸಿದ ವಾಹನವು ಒಂದು ಪೊದೆಯಲ್ಲಿದ್ದು ಮುಖ್ಯ ರಸ್ತೆಯಿಂದ ಪೂರ್ವಕ್ಕೆ ಸಾಧಾರಣ 30 ಅಡಿ ದೂರದಲ್ಲಿದ್ದು, ವಾಹನವನ್ನು ವಶಪಡಿಸಿದ ಸಮಯದಲ್ಲಿ ಯಾವುದೇ ಅನಧಿಕೃತ ಸಾರಾಯಿ ಹಾಗೂ ಮದ್ಯ ದೊರೆಯಲಿಲ್ಲ. ದಸ್ತಗಿರಿ ಮಾಡಿದ ಆರೋಪಿಗಳ ಹೇಳಿಕೆಯನ್ನು ಪಡೆದುಕೊಂಡಿರುವುದಿಲ್ಲವೆಂದು ನುಡಿದಿರುತ್ತಾರೆ. ಆದರೆ ಈ ಅಂಶವನ್ನು ತಾನು ಮಹಜರ್‌ನಲ್ಲಿ ನಮೂದಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಪ್ರತಿರಕ್ಷಾ ಸಾಕ್ಷಿ ವಿಚಾರಣೆಯಲ್ಲಿ ವಾಹನ ಮಾಲೀಕರಾದ ಶ್ರೀ ಸದಾನಂದ ಆಳ್ವರವರು ಉತ್ತರಿಸುತ್ತಾ ತಾನು ಪೀಠೋಪಕರಣ ಹಾಗೂ ಇತರ ವಸ್ತುಗಳನ್ನು ಮಾರಾಟ ಮಾಡುವ ಅಂಗಡಿಯನ್ನು ಹೊಂದಿದ್ದು ತನ್ನ ಅಂಗಡಿಯು ಮಂಗಳೂರಿನ ಸ್ಟೇಟ್ ಬ್ಯಾಂಕಿನ ಹತ್ತಿರವಿದ್ದು, ಅಂಗಡಿಯ ಹೆಸರು ಎಂ.ಡಿ. ಟ್ರೇಡ್ ಲಿಂಕ್ಸ್ ಹಾಗೂ ತಾನು ಫೀಲ್ಡ್ ವರ್ಕ್ ಮಾಡುತ್ತಿದ್ದೇನೆಂದು ನುಡಿದಿರುತ್ತಾನೆ. ತಾನು ಬಂದರು ಪೊಲೀಸ್ ಠಾಣೆ ಹತ್ತಿರವಿದ್ದು ಪೊಲೀಸ್ ಕಾನ್ಸ್‌ಟೇಬಲ್ ಸೀತಾರಾಮರವರು ಹಿಂದೆ 2, 3 ತಿಂಗಳಿಂದ ಪರಿಚಯವಿದ್ದು, ತನ್ನನ್ನು ಠಾಣೆಗೆ ಬರಲು ಹೇಳಿ ಒಂದು ವಿಟ್ನೆಸ್ ಹಾಕಲು

ಬರಬೇಕೆಂದು ತಿಳಿಸಿರುವ ಮೇರೆಗೆ ತಾನು ಬರುವುದಿಲ್ಲವೆಂದು ನಿರಾಕರಿಸಿರುವ ಪ್ರಯುಕ್ತ ತನ್ನಲ್ಲಿದ್ದ ಬೈಕಿನ ಚಾವಿಯನ್ನು ತೆಗೆದುಕೊಂಡು ಠಾಣೆಗೆ ಬಲವಂತವಾಗಿ ಬರಬೇಕೆಂದು ತಿಳಿಸಿರುವ ಮೇರೆಗೆ ಠಾಣೆಗೆ ಹೋಗಿ ಕೆಲವು ಕಾಗದಗಳಿಗೆ ಸಹಿ ಹಾಕಿರುವುದಾಗಿ ತಿಳಿಸಿರುತ್ತಾರೆ. ನಂತರ ಕೀಯನ್ನು ಹಿಂತಿರುಗಿಸಲು ಕೇಳಿದಾಗ ಸ್ವಲ್ಪ ಕೆಲಸವುಂಟು ಎಂದು ನನ್ನನ್ನು ಮುಲ್ಕಿ ಪೊಲೀಸ್ ಠಾಣೆಗೆ ಕರೆದುಕೊಂಡು ಹೋದರು. ನಂತರ ಠಾಣೆಯಲ್ಲಿಯೇ ಇದ್ದು ರಾತ್ರಿ 8.00 ಗಂಟೆಗೆ ಇದ್ದು ಬೈಕನ್ನು ಮರುದಿವಸ ಕೊಡುವುದಾಗಿ ತಿಳಿಸಿರುತ್ತಾರೆ. ಮರುದಿವಸ ಠಾಣೆಯಲ್ಲಿ ವಿಚಾರಿಸಿದಾಗ ಇದನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಿರುತ್ತಾರೆ. ನಂತರ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ ಬೈಕನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಹೊಂದಿರುತ್ತೇನೆಂದು ಹೇಳಿಕೆ ನೀಡಿರುತ್ತಾರೆ.

ಸಾರಾಯಿ ತೊಟ್ಟೆಗೂ ಹಾಗೂ ತನಗೂ ಯಾವುದೇ ಸಂಬಂಧವಿಲ್ಲ ತಾನು ನಿರಪರಾಧಿ ಮೋಟಾರು ಬೈಕನ್ನು ಬಿಡುಗಡೆಗೊಳಿಸಬೇಕೆಂದು ಈ ಪ್ರಾಧಿಕಾರದ ಮುಂದೆ ವಿನಂತಿಸಿಕೊಂಡಿರುತ್ತಾರೆ.

ಎಡಿಪಿಯವರ ಪಾಟೀ ಸವಾಲಿಗೆ ಉತ್ತರಿಸುತ್ತಾ ತಾನು ಪ್ರಕರಣದ ಆರೋಪಿ ಸದಾನಂದ ಆಳ್ವ ಆಗಿದ್ದು ದಿನಾಂಕ: 10.11.2000 ರಂದು ತನ್ನನ್ನು ಪೊಲೀಸರು ಕಾರ್ನಾಡು ಬಸ್‌ಸ್ಟ್ಯಾಂಡ್ ಹತ್ತಿರ ಬಂಧಿಸಿದ್ದಾರೆ ಎಂದರೆ ಸರಿಯಲ್ಲ ತನ್ನನ್ನು ಯಾವ ದಿನಾಂಕದಂದು ಬಂದರ್ ಪೊಲೀಸ್ ಠಾಣೆಗೆ ಕರೆತಂದರು ಎಂದು ಹೇಳಲು ನಿಖರವಾಗಿ ಹೇಳಲು ಬರುವುದಿಲ್ಲ ತನ್ನನ್ನು ಮುಲ್ಕಿ ಪೊಲೀಸು ಠಾಣೆಗೆ ಅದೇ ದಿವಸ ಕರೆದದ್ದು ತಾನು ಒಬ್ಬನೇ ಇದ್ದೆ. ದಿನಾಂಕ: 10.11.2000 ರಂದು ಬೆಳಿಗ್ಗೆ 10.00 ಗಂಟೆಗೆ ತಮ್ಮ ವಶದಲ್ಲಿ ಸುಮಾರು 3500 ರಷ್ಟು ಸಾರಾಯಿ ತುಂಬಿದ ತೊಟ್ಟೆಗಳನ್ನು ಅನಧಿಕೃತವಾಗಿ ವಶದಲ್ಲಿಟ್ಟುಕೊಂಡಿರುವುದು ಎಂದರೆ ಸರಿಯಲ್ಲ. ದಿನಾಂಕ: 12.11.2000 ರಂದು ಮೋಟಾರು ಸೈಕಲನ್ನು ವಶಪಡಿಸಿಕೊಂಡಿರುತ್ತಾರೆ ಎಂದರೆ ಸರಿಯಲ್ಲ. ತಾನು ಸುಳ್ಳು ಸಾಕ್ಷಿ ನೀಡುತ್ತಿದ್ದೇನೆ ಎಂದರೆ ಸರಿಯಲ್ಲವೆಂದು ಆರ್.ಸಿ. ಮಾಲೀಕರು ನುಡಿದಿರುತ್ತಾರೆ.

ಮೇಲಿನ ಸಾಕ್ಷಿಗಳ ಹೇಳಿಕೆ, ಪಾಟೀ ಸವಾಲಿಗೆ ನೀಡಲಾಗಿರುವ ಉತ್ತರ ಹಾಗೂ ದಾಖಲೆಗಳ ಸಾಕ್ಷ್ಯಾಧ್ಯಾರಗಳನ್ನು ಪರಿಗಣಿಸಿ:

1. ಪ್ರಕರಣದ ತನಿಖೆ ಅಧಿಕಾರಿಯವರು ನಿಧನ ಹೊಂದಿರುವುದರಿಂದ ಅವರ ಸಾಕ್ಷಿ ವಿಚಾರಣೆ ಸಾಧ್ಯವಾಗಿರುವುದಿಲ್ಲ. ವಾಹನವನ್ನು ಅಕ್ರಮ ಸೊತ್ತುಗಳ ಹೊಂದುವಿಕೆ ಬಗ್ಗೆ ಉಪಯೋಗಿಸಲಾಗಿದೆಯೆಂಬ ಸಂಶಯ ಉಂಟುಮಾಡುತ್ತದೆ.
2. ಪ್ರಕರಣದ ಪ್ರಮುಖ ಸಾಕ್ಷಿದಾರರಾದ ಶ್ರೀ ಹೆಚ್.ಡಿ. ಮೆಡೋನ್ಸ್‌ರವರ ಸಾಕ್ಷಿ ಹೇಳಿಕೆ ಪ್ರಕಾರ ವಾಹನವನ್ನು ವಶಪಡಿಸಿದ ಸಮಯದಲ್ಲಿ ವಾಹನ ಅಥವಾ ಹತ್ತಿರದ ಸ್ಥಳದಲ್ಲಿ ಯಾವುದೇ ಅನಧಿಕೃತ ಮದ್ಯ ದೊರೆಯಲಿಲ್ಲ ಹಾಗೂ ದಿನಾಂಕ: 10.11.2000 ರಂದು ಬಂಧಿಸಿದ ಆರೋಪಿಗಳ ಹೇಳಿಕೆ ಪಡೆದು ಕೊಂಡಿರುವುದಿಲ್ಲವೆಂದು ನುಡಿದಿರುತ್ತಾರೆ.
3. ವಶಪಡಿಸಿಕೊಂಡ ಸುಜುಕಿ ಫಿಯೋರಾದಲ್ಲಿ 100 ಎಂಎಲ್‌ನ 3,500 ಸಾರಾಯಿ ತೊಟ್ಟೆಗಳನ್ನು ಸಾಗಾಣಿಕೆ ಮಾಡಲು ಉಪಯೋಗಿಸಲಾಗಿರುವ ಬಗ್ಗೆ ನಂಬಲು ಸಾಧ್ಯವಾಗುವುದಿಲ್ಲ.
4. ದಿನಾಂಕ: 12.11.2001 ರಂದು 12.15 ಘಂಟೆಗೆ ವಶಪಡಿಸಿಕೊಳ್ಳಲಾಗಿರುವ ದ್ವಿಚಕ್ರ ವಾಹನ ಸಂಖ್ಯೆ: ಕೆಎ-19-ಎಲ್-2026ರ ಬಗ್ಗೆ ಪ್ರಥಮ ಮಾಹಿತಿ ವರದಿ ನೀಡಿ ಕೇಸು ದಾಖಲಿಸಿರುವುದಿಲ್ಲ.
5. ವಾಹನವನ್ನು ದಿನಾಂಕ: 10.11.2000 ರಂದು ಅಕ್ರಮ ಸಾರಾಯಿ ದಾಸ್ತಾನು ಪತ್ತೆ ಸ್ಥಳದಿಂದ ವಶಪಡಿಸಿಕೊಳ್ಳಲಾಗಿರುವುದಿಲ್ಲ ಹಾಗೂ ತಕ್ಷೀರು ಮಹಜರಿನಲ್ಲಿ ಸದ್ರಿ ವಾಹನದ ಸುಳಿವು ಲಭ್ಯವಿರುವುದಿಲ್ಲ.
6. ದಿನಾಂಕ: 12.11.2000, ವಾಹನವನ್ನು ವಶಪಡಿಸಿಕೊಳ್ಳಲಾದ ಸಂದರ್ಭದಲ್ಲಿ ವಾಹನದೊಂದಿಗೆ ಯಾವುದೇ ಅಕ್ರಮ ಸಾರಾಯಿಯನ್ನು ವಶಪಡಿಸಿಕೊಂಡಿರುವುದಿಲ್ಲ.
7. ಪಿರ್ಯಾದಿದಾರರು, ದಿನಾಂಕ: 19.5.2004 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ವಿಚಾರಣೆಯಲ್ಲಿ ಪಾಟೀ ಸವಾಲಿಗೆ ನೀಡಿರುವ ಉತ್ತರದಂತೆ, ತಕ್ಷೀರು ಸ್ಥಳದಲ್ಲಿ ವಾಹನವನ್ನು ವಶಪಡಿಸಿಕೊಂಡ ಸಂದರ್ಭದಲ್ಲಿ ಯಾವುದೇ ಅಕ್ರಮ ಸಾರಾಯಿ ದೊರಕಿಲ್ಲವೆಂದು ಹೇಳಿಕೆ ನೀಡಿರುತ್ತಾರೆ.

ಈ ಕಾರಣದಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಮಾಲೀಕರ ತಿಳುವಳಿಕೆಯಿಂದಲೇ ಈ ಕೃತ್ಯಕ್ಕೆ ವಾಹನ ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತುಪಡಿಸಲು ಸಾಧ್ಯವಾಗಿಲ್ಲ. ಪ್ರಕರಣದ ಇತರ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ಪ್ರಥಮ ವರ್ತಮಾನ ವರದಿಯಲ್ಲಿ ತಿಳಿಸಿದಂತೆ ಕರ್ನಾಟಕ ಅಬಕಾರಿ ಕಾನೂನಡಿಯಲ್ಲಿ ಅಪರಾಧ ಎಸಗಿದ ಬಗ್ಗೆ ಸಾಕಷ್ಟು ಸಾಕ್ಷ್ಯಾಧಾರಗಳು ಲಭ್ಯವಿಲ್ಲವೆಂಬ ಅಭಿಪ್ರಾಯ ವ್ಯಕ್ತಪಡಿಸಲಾಗಿದೆ. ಹಾಗೂ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಆಗಿದೆ ಎಂಬ ಅಂಶವನ್ನು ಸಾಬೀತುಪಡಿಸಲು ಪ್ರಾಸಿಕ್ಯೂಷನ್‌ನವರು ವಿಫಲರಾಗಿರುತ್ತಾರೆ.

**2ನೇ ವಿವಾದಾಂಶಕ್ಕೆ ಉತ್ತರ: ಇಲ್ಲ (ನಕರಾತ್ಮಕ)**

ಮೊದಲನೆಯ ವಿವಾದಾಂಶಕ್ಕೆ ಪಡೆದ ಉತ್ತರದಲ್ಲಿ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನದಲ್ಲಿ ಸಾರಾಯಿ ಸಾಗಾಣಿಕೆಯಾಗಿದೆ ಎಂಬುದನ್ನು ಸಾಬೀತುಪಡಿಸಲು ಪ್ರಾಸಿಕ್ಯೂಷನ್ ವಿಫಲರಾಗಿರುವುದರಿಂದ 2ನೇ ವಿವಾದಾಂಶಕ್ಕೆ ಉತ್ತರವನ್ನು ಪಡೆಯುವ ಅವಶ್ಯಕತೆ ಕಾಣ ಬರುವುದಿಲ್ಲ.

**ಮೂರನೇ ವಿವಾದಾಂಶಕ್ಕೆ ಉತ್ತರ: ಇಲ್ಲ (ನಕರಾತ್ಮಕ)**

ಮೊದಲನೇ ಮತ್ತು 2ನೇ ವಿವಾದಾಂಶದಿಂದ ಪಡೆದ ಉತ್ತರದಿಂದ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿಚಾರಣೆ ಸಂದರ್ಭ ಲಭ್ಯವಾಗಿರುವ ಸಾಕ್ಷಿಗಳ ಹೇಳಿಕೆ, ಪಾಟೀ ಸವಾಲುಗಳಿಗೆ ನೀಡಲಾಗಿರುವ ಉತ್ತರಗಳು ಹಾಗೂ ದಾಖಲೆಗಳ ಸಾಕ್ಷ್ಯಾಧಾರಗಳು ಯೋಗ್ಯವಾಗಿ ಕಾಣಬರುವುದಿಲ್ಲ. ಆದುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

ಶ್ರೀ ಎನ್.ಎಂ. ಹುಸೇನ್ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ. ಜಿಲ್ಲೆ ಆದ ನಾನು 1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 (ಎ) ರಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43ಬಿ ನಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಪೊಲೀಸು ಉಪ ನಿರೀಕ್ಷಕರು, ಮುಲ್ಕಿ ಪೊಲೀಸು ಠಾಣೆ, ಮುಲ್ಕಿರವರ ಮೊಕದ್ದಮೆ ಸಂಖ್ಯೆ: 114/2000 ದಿನಾಂಕ: 10.11.2000 ಮತ್ತು ದಿನಾಂಕ: 12.11.2000 ರಲ್ಲಿ ಜಪ್ತು ಪಡಿಸಿಕೊಂಡಿರುವ ಸುಜುಕಿ ಫಿಯಾರೋ ಮೋಟಾರು ಸೈಕಲ್ ಸಂಖ್ಯೆ: ಕೆಎ-19-ಎಲ್-2026 ನ್ನು ನಿಯಮ 43ಎ (2) ರನ್ವಯ ಈ ಪ್ರಾಧಿಕಾರ ದಿನಾಂಕ: 8.2.2001ರ ಆದೇಶದಂತೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಮಾಡಿರುವ ಆದೇಶವನ್ನು ಖಾಯಂಗೊಳಿಸಿ, ಸದರಿ ವಾಹನವನ್ನು ಆರ್.ಸಿ. ಮಾಲೀಕರಾದ ಶ್ರೀ ಕೆ. ಸದಾನಂದ ಆಳ್ವ ಬಿನ್ ಜಯರಾಂ ಆಳ್ವ, ತೇವು ಹೌಸ್, ಪರಂಗಿ ಪೇಟೆ, ಬಂಟ್ವಾಳ ಇವರ ವಶಕ್ಕೆ ಶಾಶ್ವತವಾಗಿ ಬಿಡುಗಡೆ ಮಾಡಲು ಆದೇಶಿಸಿದೆ. ಸದರಿ ಆರ್.ಸಿ. ಮಾಲೀಕರು ಪ್ರಾಧಿಕಾರಕ್ಕೆ ನೀಡಲಾಗಿರುವ ಬ್ಯಾಂಕ್ ಭದ್ರತೆ ಮೊತ್ತ ರೂ.13,250ನ್ನು ಹಿಂತಿರುಗಿಸಲು ಹಾಗೂ ಸದರಿ ಮೌಲ್ಯದ ಬಗ್ಗೆ ದಿನಾಂಕ: 29.9.2004ರ ವರೆಗೆ ಲಭ್ಯವಿರುವ ಬಡ್ಡಿ ಮೊತ್ತವನ್ನು ಸರ್ಕಾರಕ್ಕೆ ಪಾವತಿಸಲು ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 29.09.2004 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಎನ್.ಎಂ. ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.ನಂ.1:- ಶ್ರೀ ನವೀನ್ ಕುಮಾರ್, ಅಬಕಾರಿ ರಕ್ಷಕ, ಸುರತ್ಕಲ್.

ಪ್ರಾ.ಸಾ.ನಂ.2:- ಶ್ರೀ ಹೆಚ್.ಡಿ. ಮೆಡೋಸ್ಸ, ಪೊಲೀಸು ನಿರೀಕ್ಷಕರು, ಸ್ಟೇಟ್ ಇಂಟೆಲಿಜನ್ಸ್, ಬೆಂಗಳೂರು.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | | |
|---|---|---|
| ನಿಶಾನೆ ಪಿ1 | : | ರಾಸಾಯನಿಕ ವಿಶ್ಲೇಷಕರ ವರದಿಯ ಪ್ರತಿ |
| ನಿಶಾನೆ ಪಿ2 | : | ಮುಲ್ಕಿ ಪೊಲೀಸು ಠಾಣೆಗೆ ಸಲ್ಲಿಸಿದ ವರದಿ |
| ನಿಶಾನೆ ಪಿ2ಎ | : | ದೃಢೀಕರಿಸಿದ ಸಹಿ |
| ನಿಶಾನೆ ಪಿ3 | : | ಸೊತ್ತುಗಳ ಪಟ್ಟಿ |
| ನಿಶಾನೆ ಪಿ3ಎ | : | ದೃಢೀಕರಿಸಿದ ಸಹಿ |
| ನಿಶಾನೆ ಪಿ4 | : | ಮಹಜರು |
| ನಿಶಾನೆ ಪಿ4ಎ | : | ದೃಢೀಕರಿಸಿದ ಸಹಿ |
| ನಿಶಾನೆ ಪಿ5 | : | ದಿನಾಂಕ: 12.11.2000 ರಂದು ಸಲ್ಲಿಸಿದ ವರದಿ |
| ನಿಶಾನೆ ಪಿ5ಎ | : | ದೃಢೀಕರಿಸಿದ ಸಹಿ |
| ನಿಶಾನೆ ಪಿ6 | : | ಪ್ರಥಮ ಮಾಹಿತಿ ವರದಿ |
| ನಿಶಾನೆ ಪಿ6ಎ | : | ದೃಢೀಕರಿಸಿದ ಸಹಿ |
| ನಿಶಾನೆ ಪಿ7 | : | 43ರ ವರದಿ |
| ನಿಶಾನೆ ಪಿ7ಎ | : | ದೃಢೀಕರಿಸಿದ ಸಹಿ |

**ಅನುಬಂಧ-3**

**ಫಿರ್ಯಾದುದಾರರ ಪರ ಅರ್ಜಿದಾರರು ಮಂಡಿಸಲಾದ ಸೊತ್ತುಗಳು:**

ಡಿಡಬ್ಲ್ಯೂ-1 : ಅರ್ಜಿದಾರರ ಹೇಳಿಕೆ-ಶ್ರೀ ಕೆ. ಸದಾನಂದ ಆಳ್ವ.

**ಅನುಬಂಧ-4**

ವಾಹನದಲ್ಲಿದ್ದ ಇತರ ಸೊತ್ತುಗಳ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು - ಇಲ್ಲಾ -

**ಅನುಬಂಧ-5**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು - ಇಲ್ಲಾ -

**ಎನ್.ಎಂ. ಹುಸೇನ್**

ಪಿ.ಆರ್. 1496 ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/83/ಡಿಟಿಸಿಆರ್/2003-2004, ದಿನಾಂಕ: 24ನೇ ಸೆಪ್ಟೆಂಬರ್ 2004**

**ಉಪಸ್ಥಿತರು:** ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದಿದಾರರು:** ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ, ಬೆಳ್ತಂಗಡಿ.

**ವಿರುದ್ಧ**

**ಆರೋಪಿಗಳು:** 1. ಡೀಕಯ್ಯ ಗೌಡ ಬಿನ್ ವಾಸುಗೌಡ, ಕಿನ್ಯಾಜೆ ಮನೆ, ಕೊಯ್ಯೂರು ಗ್ರಾಮ, ಬೆಳ್ತಂಗಡಿ.

2. ನಾರಾಯಣ ಮಡಿವಾಳ ಬಿನ್ ಅಣ್ಣಿ ಮಡಿವಾಳ, ಕಲ್ಲಂಗಡಿ ಮನೆ, ಕೊಯ್ಯೂರು ಗ್ರಾಮ, ಬೆಳ್ತಂಗಡಿ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 17.10.2003 ರಂದು ರಾತ್ರಿ 8.00 ಗಂಟೆಗೆ ಬೆಳ್ತಂಗಡಿ ವಲಯದ ಅಬಕಾರಿ ನಿರೀಕ್ಷಕರು, ತಮ್ಮ ಸಿಬ್ಬಂದಿಯವರೊಂದಿಗೆ ಬೆಳ್ತಂಗಡಿ ತಾಲ್ಲೂಕು ಕೊಯ್ಯೂರು ಗ್ರಾಮದ ಹೂವಿನ ಕಟ್ಟೆ ಎಂಬಲ್ಲಿ ರಸ್ತೆಗಸ್ತು ತಿರುಗುತ್ತಿರುವಾಗ ಹೂವಿನ ಕಟ್ಟೆಯಿಂದ ಕೊಯ್ಯೂರು ಕಡೆಗೆ ಒಂದು ಬಜಾಜ್-ಎಂ-80, ಸಂಖ್ಯೆ: ಕೆಎ-21ಇ-7146 ದ್ವಿಚಕ್ರ ವಾಹನವು ಬರುತ್ತಿರುವುದನ್ನು ಕಂಡು ನಿಲ್ಲಿಸಲು ಸೂಚನೆ ನೀಡಿದಾಗ ಸ್ವಲ್ಪ ಮುಂದಕ್ಕೆ ಹೋಗಿ ಮಾರ್ಗ ಮಧ್ಯದಲ್ಲಿ ನಿಲ್ಲಿಸಿ ಚಾಲಕನು ಹಾಗೂ ಹಿಂಬದಿ ಕುಳಿತಿದ್ದ ಇಬ್ಬರು ವ್ಯಕ್ತಿಗಳು ಓಡಿಹೋಗಲು ಪ್ರಯತ್ನಿಸಿದರು. ಸದರಿ ವ್ಯಕ್ತಿಗಳನ್ನು ಹಿಡಿದು ವಿಚಾರಿಸಿದಾದ ಅವರ ಕೈಯಲ್ಲಿ ಪ್ಲಾಸ್ಟಿಕ್ ಗೋಣಿ ಚೀಲದಲ್ಲಿ ತುಂಬಿದ ಸಾರಾಯಿ ತೊಟ್ಟೆಗಳು ಇರುವುದು ಕಂಡುಬಂದಿತು. ಸದರಿ ಸಾರಾಯಿ ತೊಟ್ಟೆಗಳನ್ನು ಸಾಗಾಣಿಕೆ ಮಾಡಲು ರಹದಾರಿ ಪತ್ರ ವಿದೆಯೆಂದು ವಿಚಾರಿಸಿದಾಗ ತನ್ನಲ್ಲಿ ಯಾವುದೇ ಪರವಾನಿಗೆ ಅಥವಾ ರಹದಾರಿ ಇಲ್ಲವೆಂದು ತಿಳಿಸಿರುವ ಮೇರೆಗೆ ಇದು ಕರ್ನಾಟಕ ಅಬಕಾರಿ ಕಾಯ್ದೆ ಪ್ರಕಾರ 11 ಮತ್ತು 14 ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ ಪಂಚರ ಸಮಕ್ಷಮ ಸಾರಾಯಿ ತೊಟ್ಟೆಗಳನ್ನು ಪರಿಶೀಲಿಸಿದಾಗ 100 ಎಂಎಲ್ 250 ಸಾರಾಯಿ ತೊಟ್ಟೆಗಳು ಇರುವುದು ಕಂಡು ಬಂತು. ಇದು ಮೈಶುಗರ್ ಸಾರಾಯಿ ಸಂಸ್ಕರಣಾ ಘಟಕ, ಮಂಗಳೂರು ಆಗಿದ್ದು ಇದರಲ್ಲಿ 35 ಯುಪಿ ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಿದ್ದು, ಮದ್ಯಪಾನ ಆರೋಗ್ಯಕ್ಕೆ ಹಾನಿಕಾರ ಇರುವುದಾಗಿ ಕೆಂಪು ಅಕ್ಷರದಲ್ಲಿ ಬರೆದಿರುತ್ತದೆ. ನಂತರ ಪಂಚರ ಸಮಕ್ಷಮ ಸಾರಾಯಿ ತೊಟ್ಟೆಯಿಂದ 100 ಎಂಎಲ್‌ನ 10 ಸಾರಾಯಿ ತೊಟ್ಟೆಗಳನ್ನು ರಾಸಾಯನಿಕ ವಿಶ್ಲೇಷಣೆಗಾಗಿ ತೆಗೆದು ಇಲಾಖಾ ಸೀಲಿನಿಂದ ಸೀಲು ಮಾಡಿರುತ್ತಾರೆ. ನಂತರ ಚಾಲಕನ ಹೆಸರು ವಿಚಾರಿಸಿದಾಗ ಡೀಕಯ್ಯ ಬಿನ್ ವಾಸುಗೌಡ, ಕಿನ್ಯಾಜೆ ಮನೆ, ಕೊಯ್ಯೂರು ಗ್ರಾಮ, ಬೆಳ್ತಂಗಡಿ ಮತ್ತು ಇನ್ನೊಬ್ಬ ವ್ಯಕ್ತಿ ನಾರಾಯಣ ಮಡಿವಾಳ ಬಿನ್ ಅಣ್ಣಿ ಮಡಿವಾಳ, ಕಲ್ಲಂಗಡಿ ಮನೆ, ಕೊಯ್ಯೂರು ಗ್ರಾಮ, ಬೆಳ್ತಂಗಡಿ ಎಂದು ತಿಳಿಸಿರುತ್ತಾರೆ. ಬಳಿಕ ಆರೋಪಿಗಳ ಗುರುತು ಚೀಟಿಗಳನ್ನು ತಯಾರಿಸಿ ಮಾದರಿಗೆ ಹಾಗೂ ಸೊತ್ತುಗಳಿಗೆ ಅಂಟಿಸಿರುತ್ತಾರೆ. ಸಾಗಾಣಿಕೆಗೆ ಬಳಸಿದ ವಾಹನವನ್ನು ಪರಿಶೀಲಿಸಿದಾಗ ಅದು ಬಜಾಜ್ ಎಂ 80 ಕೆಂಪು ಬಣ್ಣದಾಗಿರುತ್ತದೆ. ಅದರ ನೋಂದಣಿ ಸಂಖ್ಯೆ: ಕೆಎ-21-ಇ-7146 ಹಾಗೂ ಇಂಜಿನ್ ನಂ:16 ಇಬಿಡಿಎಲ್-67693 ಮತ್ತು ಚಾಸಿಸ್ ನಂ: 16 ಸಿಬಿಡಿಎಲ್ 67250 ಆಗಿರುತ್ತದೆ. ಇದು ಅಕ್ರಮ ಸಾರಾಯಿ ಸಾಗಾಣಿಕೆ ಆಗಿರುವುದರಿಂದ ಸಾರಾಯಿ ತೊಟ್ಟೆಗಳನ್ನು ಹಾಗೂ ಸಾಗಾಣಿಕೆಗೆ ಬಳಸಿದ ಸ್ಕೂಟರನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ವಶಪಡಿಸಿಕೊಂಡು ಮಹಜರನ್ನು ಸ್ಥಳದಲ್ಲೇ ತಯಾರಿಸಿ ಆರೋಪಿಗಳನ್ನು ದಸ್ತಗಿರಿ ಮಾಡಿ ಆರೋಪಿಗಳ ವಿರುದ್ಧ ಮೊಕದ್ದಮೆ ಸಂಖ್ಯೆ: 4/03-04, ದಿನಾಂಕ: 17.10.2003 ರಂದು ಮೊಕದ್ದಮೆ ದಾಖಲಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯರವರು ಪ್ರಕರಣದ ತನಿಖೆಯನ್ನು ಕೈಗೊಂಡು ಪ್ರಕರಣದ ಮಾದರಿ ಸಾರಾಯಿ ಸ್ಯಾಚೆಟ್‌ಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ರಾಸಾಯನಿಕ ತಜ್ಞರ ವರದಿಯಲ್ಲಿ ಸಾರಾಯಿಯ ಮದ್ಯಸಾರ ಪ್ರಮಾಣ ಶೇಕಡ 30 ವಿದ್ದು 47 ಡಿಗ್ರಿ ಯುಪಿ ಪತ್ತೆಯಾಗಿದ್ದು ಇದು ವೀಕ್ ಸಾರಾಯಿ ಆಗಿದ್ದು, ಮಾನವ ಸೇವನೆಗೆ ಯೋಗ್ಯವಲ್ಲವೆಂದು ದೃಢೀಕರಣ ಪತ್ರ ನೀಡಿರುವುದರಿಂದ ವಶಪಡಿಸಿಕೊಂಡ ಸಾರಾಯಿ ತೊಟ್ಟೆಗಳನ್ನು ದಿನಾಂಕ: 2.1.2004 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಈ ಪ್ರಾಧಿಕಾರ ಆದೇಶ ನೀಡಿರುತ್ತದೆ.

ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನ ಸ್ಕೂಟರಿನ ವಾರಸುದಾರರನ್ನು ಪತ್ತೆ ಹಚ್ಚಲು ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯರವರು ಸಹಾಯಕ ಪ್ರಾದೇಶಿಕ ಅಧಿಕಾರಿ, ಪುತ್ತೂರು ಇವರಿಗೆ ಪತ್ರ ಬರೆಯಲಾಗಿದ್ದು ಸದ್ರಿ ಪತ್ರಕ್ಕೆ ಉತ್ತರವಾಗಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಪುತ್ತೂರು ಇವರು ವಾಹನದ "ಬಿ" ಅಬ್‌ಸ್ಟ್ರಾಕ್ಟ್‌ನ್ನು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ "ಬಿ" ಅಬ್‌ಸ್ಟ್ರಾಕ್ಟ್ ವರದಿ ಪ್ರಕಾರ ಶ್ರೀ ಜಗನ್ನಾಥ ಹೆಗ್ಡೆ ಬಿನ್ ವೆಂಕಪ್ಪ ಹೆಗ್ಡೆ, ಆದರ್ಶ ನಗರ, ಲೈಲಾ ಪೋಸ್ಟ್, ಬೆಳ್ತಂಗಡಿ ತಾಲ್ಲೂಕು ಇವರಿಗೆ ಪ್ರಾಧಿಕಾರವು ದಿನಾಂಕ: 8.6.2004 ರಂದು ಕಾರಣ ಕೇಳಿ ನೋಟೀಸು ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೀಡಿದ ನೋಟೀಸು ದಿನಾಂಕ: 11.6.2004 ರಂದು ವಾಹನ ಮಾಲೀಕರಿಗೆ ತಲುಪಿದ ಸ್ವೀಕೃತಿಯು ಪ್ರಾಧಿಕಾರಕ್ಕೆ ತಲುಪಿರುತ್ತದೆ. ವಾಹನ ಮಾಲೀಕರು ನೋಟೀಸು ತಲುಪಿ 3 ತಿಂಗಳು ಕಳೆದಿದ್ದರೂ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಬಿಡುಗಡೆಗೆ ಕೋರಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ರಡಿಯಲ್ಲಿ ಪ್ರಕರಣ ದಾಖಲೆ ಮಾಡುವಾಗ ಅಪರಾಧಿ ಪತ್ತೆಯಾಗದಿದ್ದಲ್ಲಿ ಅಥವಾ ಅಪರಾಧಿ ಪತ್ತೆಯಾಗುವ ಸಾಧ್ಯತೆಗಳಿಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಸೊತ್ತುಗಳನ್ನು ತಮ್ಮದೆಂದು, ಅವುಗಳನ್ನು ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾಧ್ಯಾರಗಳೊಂದಿಗೆ ಹಾಜರಾಗದೇ ಇದ್ದಲ್ಲಿ ಸದರಿ ಸೊತ್ತುಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಪ್ರಾಧಿಕಾರವು ಸಾರಾಯಿ ತೊಟ್ಟೆಗಳನ್ನು ಮತ್ತು ಸಾಗಾಣಿಕೆಗೆ ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣವು ದಾಖಲುಪಡಿಸಿ ಸುಮಾರು ಒಂದು ವರ್ಷ ಕಳೆದಿದ್ದರೂ ಜಪ್ತುಪಡಿಸಲಾಗಿರುವ ವಾಹನ ಮಾಲೀಕರಿಗೆ ಕಾರಣ ಕೇಳಿ ನೋಟೀಸನ್ನು ಜಾರಿ ಮಾಡಿ, ನೋಟೀಸು ಸ್ವೀಕೃತಿಗೊಂಡು 3 ತಿಂಗಳು ಕಳೆದಿದ್ದರೂ ವಾಹನವು ತಮ್ಮದೆಂದು ಕೋರಿ ವಾಹನದ ಬಿಡುಗಡೆಗೆ ಈ ಪ್ರಾಧಿಕಾರದ ಮುಂದೆ ವಾಹನ ಮಾಲೀಕರು ಹಾಜರಾಗಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ದಿನಾಂಕ: 17.10.2003 ರಂದು ಆರೋಪಿಗಳು 250 ಸಾರಾಯಿ ತೊಟ್ಟೆಗಳನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿದ್ದಾಗ ಬೆಳ್ತಂಗಡಿ ವಲಯದ ಅಬಕಾರಿ ನಿರೀಕ್ಷಕರು ಸ್ಥಳ ಮಹಜರಿನೊಂದಿಗೆ ಅಕ್ರಮ ಸೊತ್ತುಗಳನ್ನು ಹಾಗೂ ಸಾಗಾಟಕ್ಕೆ ಉಪಯೋಗಿಸಲಾಗಿದ್ದ ದ್ವಿಚಕ್ರ ವಾಹನವನ್ನು ವಶಪಡಿಸಿಕೊಂಡಿರುತ್ತಾರೆ. ವಾಹನದಲ್ಲಿ ಅಕ್ರಮವಾಗಿ ಸಾರಾಯಿಯನ್ನು ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ, ಹಾಗೂ ವಾಹನವನ್ನು ಅಬಕಾರಿ ಕಾಯ್ದೆ ಉಲ್ಲಂಘನೆಗೆ ಬಳಸಿರುವುದು ಸ್ಪಷ್ಟವಾಗಿರುತ್ತದೆ.

ಅಲ್ಲದೇ, ಪ್ರಕರಣವನ್ನು ದಾಖಲುಪಡಿಸಿ ಈಗಾಗಲೇ ಒಂದು ವರ್ಷ ಕಳೆದಿದ್ದರೂ ಹಾಗೂ ಈ ಪ್ರಾಧಿಕಾರವು ನೀಡಲಾಗಿದ್ದ ಕಾರಣ ಕೇಳಿ ನೋಟೀಸನ್ನು ವಾಹನ ಮಾಲೀಕರು ಸ್ವೀಕರಿಸಿ ಸುಮಾರು 3 ತಿಂಗಳು ಕಳೆದಿದ್ದರೂ, ಈವರೆಗೂ ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವು ತನ್ನದೆಂದು ಅದರ ಬಿಡುಗಡೆಗೆ ಕೋರದೇ ಇರುವುದನ್ನು ಗಮನಿಸಿದಾಗ ವಾಹನ ಮಾಲೀಕರು ತಮ್ಮ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಚಟುವಟಿಕೆಗೆ ಬಳಸಿರುತ್ತಾರೆಂದು ಪ್ರಾಧಿಕಾರವು ಭಾವಿಸಬೇಕಾಗುತ್ತದೆ. ಹಾಗೂ ಈ ಪ್ರಕರಣವನ್ನು ನಡೆಸಲು ವಾಹನ ಮಾಲೀಕರಿಗೆ ಯಾವುದೇ ಉತ್ಸಾಹ ಇಲ್ಲವೆಂದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಮೇಲಿನ ಪುರಾವೆಗಳಿಂದ ಹಾಗೂ ಪ್ರಾಧಿಕಾರದ ಮುಂದೆ ಲಭ್ಯವಿರುವ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಸ್ಪಷ್ಟವಾಗಿ ಮೇಲ್ನೋಟಕ್ಕೆ ಸಾಬೀತಾಗಿದ್ದು, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಸದರಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಎಂ 80 ಸಂಖ್ಯೆ: ಕೆಎ-21-ಇ-7146ನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವುದರಿಂದ ಈ ಕೆಳಗಿನ ಆದೇಶ.

**ಆದೇಶ**

ಶ್ರೀ ಎನ್.ಎಂ. ಹುಸೇನ್ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ. ಜಿಲ್ಲೆ, ಮಂಗಳೂರು ಆದ ನಾನು 1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 (ಎ) ರಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ 43 (ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಎ)2 ರನ್ವಯ ಅಬಕಾರಿ ನಿರೀಕ್ಷರು, ಬೆಳ್ತಂಗಡಿ ವಲಯರವರ ಮೊಕದ್ದಮೆ ಸಂಖ್ಯೆ: 4/2003-04 ದಿನಾಂಕ: 17.10.2003 ರಲ್ಲಿ ಜಪ್ತುಪಡಿಸಿರುವ ವಾಹನ ಬಜಾಜ್ ಎಂ 80 ಸಂಖ್ಯೆ: ಕೆಎ-21-ಇ-7146ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 24.09.2004 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1497

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/203/ಡಿಟಿಸಿಆರ್/2003-2004, ದಿನಾಂಕ: 25ನೇ ಸೆಪ್ಟೆಂಬರ್ 2004**

**ಉಪಸ್ಥಿತರು:** ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದಿದಾರರು:** ಅಬಕಾರಿ ಉಪ ನಿರೀಕ್ಷಕರು, ಬಂಟ್ವಾಳ ಮೂಡ ಉಪ ವಲಯ, ಬಂಟ್ವಾಳ.

**ವಿರುದ್ಧ**

**ಆರೋಪಿಗಳು:** ಆರೋಪಿ ಪತ್ತೆಯಾಗಿರುವುದಿಲ್ಲ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 11.3.2004 ರಂದು ಬಂಟ್ವಾಳ ತಾಲ್ಲೂಕು ಕುಕ್ಕಾಜೆ, ಮಂಡಿ ರಸ್ತೆಯ ಪಂಜಾಜೆಗೆ ಹೋಗುವ ತಿರುವಿನಲ್ಲಿ ದೊರೆತ ಖಚಿತ ವರ್ತಮಾನದ ಮೇರೆಗೆ ಬಂಟ್ವಾಳ ಮೂಡ ಉಪ ವಲಯದ ಅಬಕಾರಿ ಉಪ ನಿರೀಕ್ಷಕರು ಹಾಗೂ ತಮ್ಮ ಸಿಬ್ಬಂದಿಯವರೊಂದಿಗೆ ಸದರಿ ಸ್ಥಳದಲ್ಲಿ ಹೊಂಚು ಹಾಕುತ್ತಿರುವಾಗ ಸಂಜೆ ಸುಮಾರು 7 ಘಂಟೆ ಸಮಯದಲ್ಲಿ ಕುಕ್ಕಾಜೆ ಮಂಡಿ ಹೋಗುವ ತಿರುವಿನಲ್ಲಿ ಒಂದು ಬಿಳಿ ಬಣ್ಣದ ಅಂಬಾಸಿಡರ್ ಕಾರು ಬರುತ್ತಿರುವುದನ್ನು ಕಂಡು, ಅನುಮಾನದ ಮೇರೆಗೆ ನಿಲ್ಲಿಸಲು ಸೂಚನೆ ನೀಡಿದಾಗ ಕಾರನ್ನು ನಿಲ್ಲಿಸದೇ ವೇಗವಾಗಿ ಚಲಾಯಿಸಿಕೊಂಡು ಸುಮಾರು

100 ಗಜ ಮುಂದಕ್ಕೆ ಚಲಿಸಿ ಕಾರನ್ನು ಮಾರ್ಗದ ಬದಿಯಲ್ಲಿ ನಿಲ್ಲಿಸಿ ಚಾಲಕನು ಕಾರನ್ನು ಬಿಟ್ಟು ಪರಾರಿಯಾದನು. ಆತನು ಯಾರೆಂದು ತಿಳಿದು ಬರಲಿಲ್ಲ. ಕಾರನ್ನು ಶೋಧಿಸಲು ಮಾನ್ಯ ನ್ಯಾಯಾಲಯದ ವಾರೆಂಟ್ ತರಲು ಸಮಯಾವಕಾಶ ಇಲ್ಲದ ಕಾರಣ ಸಾಕ್ಷಿದಾರರ ಸಮಕ್ಷಮ ಸಮೋಚಿತ ಆಧಾರ ತಯಾರಿಸಿ ಕಾರನ್ನು ಪರಿಶೀಲಿಸಿದಾಗ ಅದು ಬಿಳಿ ಬಣ್ಣದ ಅಂಬಾಸಿಡರ್ ಕಾರು ಆಗಿದ್ದು ಅದರ ನೋಂದಣಿ ಸಂಖ್ಯೆ: ಸಿಟಿಎ:9797 ಆಗಿರುತ್ತದೆ. ಕಾರಿನ ಒಳಗಡೆ ನೋಡಲಾಗಿ ಹಿಂದಿನ ಸೀಟಿನ ಅಡಿಯಲ್ಲಿ 5 ಪಾಲಿಥೀನ್ ಚೀಲದ ಕಟ್ಟು ಮತ್ತು ಕಾರಿನ ಡಿಕ್ಕಿನಲ್ಲಿ 5 ಪಾಲಿಥೀನ್ ಚೀಲದ ಕಟ್ಟು, ಒಟ್ಟು 10 ಪಾಲಿಥೀನ್ ಚೀಲಗಳು ಇದ್ದು ಇದನ್ನು ಬಿಚ್ಚಿ ನೋಡಲಾಗಿ ಒಟ್ಟು 100 ಎಂಎಲ್‌ನ 5000 ಸಾರಾಯಿ ತೊಟ್ಟೆಗಳು ಇರುವುದು ಕಂಡು ಬಂತು. ಸದರಿ ಸಾರಾಯಿ ತೊಟ್ಟೆಗಳನ್ನು ಪರಿಶೀಲಿಸಿದಾಗ ಮೈಶುಗರ್ ಕಂಪೆನಿ ಲಿಮಿಟೆಡ್, ಹಾಸನ ಜಿಲ್ಲೆ ಎಂದು ಅಕ್ಷರದಿಂದ ಬರೆದಿದ್ದು ಕಂಡು ಬಂದಿರುತ್ತದೆ. ಕಾರನ್ನು ಕೂಲಂಕುಷವಾಗಿ ಪರಿಶೀಲಿಸಿ ಸಾರಾಯಿ ತೊಟ್ಟೆಗಳನ್ನು ಸಾಗಾಣಿಕೆ ಮಾಡಲು ಯಾವುದೇ ದಾಖಲಾತಿಗಳು ಕಂಡು ಬಾರದ ಕಾರಣ ಇದು ಅಕ್ರಮವಾಗಿ ಕಳ್ಳ ಸಾಗಾಣಿಕೆ ಮಾಡಿರುವುದು ಎಂದು ಖಚಿತವಾಗಿರುವುದರಿಂದ ಸದರಿ ತೊಟ್ಟೆಗಳಲ್ಲಿ ಒಟ್ಟು 20 ಸಾರಾಯಿ ತೊಟ್ಟೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಅವುಗಳನ್ನು ಪ್ರತ್ಯೇಕ ಕಾಗದದ ಲಕೋಟೆಯಲ್ಲಿರಿಸಿ ದಾರ ಕಟ್ಟಿ ಇಲಾಖೆಯ ಮೊಹರು ಮಾಡಿರುತ್ತಾರೆ. ಉಳಿದ ಸಾರಾಯಿ ಸ್ಯಾಚೆಟ್‌ಗಳಿದ್ದ ಪಾಲಿಥೀನ್ ಚೀಲಗಳ ಬಾಯಿಯನ್ನು ಕಟ್ಟಿ ಮೊಹರು ಮಾಡಿರುತ್ತಾರೆ. ಮಾದರಿ ಮೊಹರನ್ನು ತಯಾರಿಸಿರುತ್ತಾರೆ. ಮಾದರಿಗಳಿಗೂ ಪಾಲಿಥೀನ್ ಚೀಲಗಳಿಗೂ ಗುರುತಿನ ಚೀಟಿ ಅಂಟಿಸಿರುತ್ತಾರೆ. ವಾಹನ ಮತ್ತು ಸಿಕ್ಕಿದ ಸೊತ್ತುಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ವಶಪಡಿಸಿಕೊಂಡು, ಮಹಜರನ್ನು ಸ್ಥಳದಲ್ಲೇ ಬರೆದು ಆರೋಪಿಗಳ ವಿರುದ್ಧ ಮೊಕದ್ದಮೆ ಸಂಖ್ಯೆ: 3/03-04, ದಿನಾಂಕ: 11.3.2004 ರಂದು ಮೊಕದ್ದಮೆ ದಾಖಲಿಸಿಕೊಂಡಿರುತ್ತಾರೆ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯರವರ ತನಿಖಾ ವರದಿ ಸಂಖ್ಯೆ: ಇಎಕ್ಸ್‌ಇ:ಬಿಎನ್‌ಟಿ:ಆರ್‌ಸಿಆರ್:26:03-04, ದಿನಾಂಕ: 24.7.2004 ಮತ್ತು 9.9.2004ರ ಪತ್ರದಲ್ಲಿ ವಶಪಡಿಸಿಕೊಂಡ ಸಾರಾಯಿಯ ಸ್ಯಾಂಪಲ್‌ಗಳನ್ನು ರಾಸಾಯನಿಕ ವಿಶ್ಲೇಷಣೆಗೆ ದಿನಾಂಕ: 8.4.2004 ರಂದು ಸಲ್ಲಿಸಲಾಗಿದ್ದು, ರಾಸಾಯನಿಕ ವಿಶ್ಲೇಷಕರು ಇವರ ಪತ್ರ ಸಂಖ್ಯೆ: 400-10, ದಿನಾಂಕ: 16.7.2004 ರಲ್ಲಿ ಸಾರಾಯಿಯ ಮದ್ಯಸಾರ ಪ್ರಮಾಣ ಶೇಕಡ 25 ಇರುತ್ತದೆ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ. ಇದು ನಕಲಿ ಸ್ಯಾಚೆಟ್‌ಗಳಾಗಿದ್ದು ಇದನ್ನು ಮಾರಾಟ ಮಾಡಲು ಅಸಾಧ್ಯವಾಗಿದ್ದು, ಹಾಗೂ ಸದರಿ ಸ್ಯಾಚೆಟ್‌ಗಳನ್ನು ಜಪ್ತು ಮಾಡಿ ಸುಮಾರು 6 ತಿಂಗಳು ಕಳೆದಿದ್ದರೂ, ಉಬ್ಬಿಕೊಂಡು ಕೆಲವೊಂದು ತೊಟ್ಟೆಗಳು ಸೋರಿಹೋಗಿರುತ್ತದೆ. ಸದರಿ ತೊಟ್ಟೆಗಳನ್ನು ಕಛೇರಿಯಲ್ಲಿ ಇಟ್ಟುಕೊಳ್ಳಲು ಸ್ಥಳಾವಕಾಶವಿಲ್ಲದ ಪ್ರಯುಕ್ತ ಇದನ್ನು ನಾಶಪಡಿಸಲು ಆದೇಶ ನೀಡಬೇಕೆಂದು ಅಬಕಾರಿ ನಿರೀಕ್ಷಕರು ಈ ಮೂಲಕ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತು ಮಾಡಿದ ಅಂಬಾಸಿಡರ್ ಕಾರು ಸಂಖ್ಯೆ: ಸಿಟಿಎ:9797ರ ವಾರಸುದಾರರನ್ನು ಪತ್ತೆ ಹಚ್ಚಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಮಂಗಳೂರು ಇವರಿಗೆ ಪತ್ರ ಬರೆಯಲಾಗಿದ್ದು ಸದರಿ ಪತ್ರಕ್ಕೆ ಉತ್ತರವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಮಂಗಳೂರು ಇವರು ವಾಹನದ "ಬಿ" ಅಬ್‌ಸ್ಟ್ರಾಕ್ಟ್‌ನ್ನು ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯರವರ ಮೂಲಕ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ "ಬಿ" ಅಬ್‌ಸ್ಟ್ರಾಕ್ಟ್ ಪ್ರಕಾರ ವಾಹನ ಮಾಲೀಕರು ಶ್ರೀ ಪಿ. ಜಯರಾಮ ಬಿನ್ ನೇಮಗೌಡ, ಪುರ್ಲಪ್ಪಾಡಿ, ಕೆಳಗಿನ ಮನೆ, ಅಂಚಿ ಕೊಡಂಗೈ, ವಿಟ್ಲ, ಬಂಟ್ವಾಳ ಇವರಿಗೆ ಈ ಪ್ರಾಧಿಕಾರವು ದಿನಾಂಕ: 27.8.2004 ರಂದು ಕಾರಣ ಕೇಳಿ ನೋಟೀಸು ನೀಡಲಾಗಿದ್ದು ಸದರಿ ಕಾರಣ ಕೇಳಿ ನೀಡಿದ ನೋಟೀಸು ದಿನಾಂಕ: 1.9.2004 ರಂದು ವಾಹನ ಮಾಲೀಕರಿಗೆ ತಲುಪಿದ ಸ್ವೀಕೃತಿಯು ಪ್ರಾಧಿಕಾರಕ್ಕೆ ತಲುಪಿರುತ್ತದೆ. ಕಾರಣ ಕೇಳಿ ನೋಟೀಸ್‌ನಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರಂತೆ ಈ ಪತ್ರ ತಲುಪಿದ 15 ದಿನದೊಳಗೆ ನಿಮ್ಮ ಹೇಳಿಕೆಯನ್ನು ನೀವು ಖುದ್ದಾಗಿ ಅಥವಾ ವಕೀಲರ ಮೂಲಕ ಈ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು ತಪ್ಪಿದ್ದಲ್ಲಿ ನಿಮ್ಮ ಹೇಳಿಕೆ ಯಾವುದೂ ಇಲ್ಲವೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 (2ನೇ ತಿದ್ದುಪಡಿ 1967) ಕಲಂ 43(ಎ) ಪ್ರಕಾರ ವಶಪಡಿಸಿಕೊಂಡ ಸಾರಾಯಿ ಮತ್ತು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಎಂದು ತಿಳಿಯಪಡಿಸಲಾಗಿದೆ. ವಾಹನ ಮಾಲೀಕರು ನೋಟೀಸು ತಲುಪಿ 1 ತಿಂಗಳು ಕಳೆದಿದ್ದರೂ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನ ಬಿಡುಗಡೆಗೆ ಕೋರಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ರಡಿಯಲ್ಲಿ ಪ್ರಕರಣ ದಾಖಲೆ ಮಾಡುವಾಗ ಅಪರಾಧಿ ಪತ್ತೆಯಾಗದಿದ್ದಲ್ಲಿ ಅಥವಾ ಅಪರಾಧಿ ಪತ್ತೆಯಾಗುವ ಸಾಧ್ಯತೆಗಳಿಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಸೊತ್ತುಗಳನ್ನು ತಮ್ಮದೆಂದು, ಅವುಗಳನ್ನು ಕಾನೂನು ಬದ್ದವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರಾಗದೇ ಇದ್ದಲ್ಲಿ ಸದರಿ ಸೊತ್ತುಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಪ್ರಾಧಿಕಾರವು ಸಾರಾಯಿಯನ್ನು ಮತ್ತು ಸಾಗಾಣಿಕೆಗೆ ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣವು ದಾಖಲುಪಡಿಸಿ ಸುಮಾರು ಆರು ತಿಂಗಳು ಕಳೆದಿದ್ದರೂ ಜಪ್ತುಪಡಿಸಲಾಗಿರುವ ವಾಹನ ಮಾಲೀಕರಿಗೆ ಕಾರಣ ಕೇಳಿ ನೋಟೀಸನ್ನು ಜಾರಿ ಮಾಡಿ, ನೋಟೀಸು ಸ್ವೀಕೃತಿಗೊಂಡು 1 ತಿಂಗಳು ಕಳೆದಿದ್ದರೂ ವಾಹನವು ತಮ್ಮದೆಂದು ಕೋರಿ ವಾಹನದ ಬಿಡುಗಡೆಗೆ ಈ ಪ್ರಾಧಿಕಾರದ ಮುಂದೆ ವಾಹನ ಮಾಲೀಕರು ಹಾಜರಾಗಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ದಿನಾಂಕ: 11.3.2004 ರಂದು ಆರೋಪಿಗಳು 100 ಎಂಎಲ್‌ನ 5,000 ಸಾರಾಯಿ ತೊಟ್ಟೆಗಳನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿದ್ದಾಗ ಬಂಟ್ವಾಳ ಮೂಡ ಉಪ ವಲಯದ ಅಬಕಾರಿ ಉಪ ನಿರೀಕ್ಷಕರು ಸ್ಥಳ ಮಹಜರಿನೊಂದಿಗೆ ಸಾರಾಯಿ ಮತ್ತು ಅಂಬಾಸಿಡರ್ ಕಾರನ್ನು ವಶಪಡಿಸಿಕೊಂಡಿರುತ್ತಾರೆ. ಜಪ್ತು ಪಡಿಸಿದ ದ್ರವ್ಯವು ರಾಸಾಯನಿಕ ತಜ್ಞರ ವರದಿಯ ಪ್ರಕಾರ ಸಾರಾಯಿ ಎಂದು ದೃಢಪಟ್ಟಿದ್ದು ವಾಹನದಲ್ಲಿ ಅಕ್ರಮವಾಗಿ ಸಾರಾಯಿಯನ್ನು ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಹಾಗೂ ವಾಹನವನ್ನು ಅಬಕಾರಿ ಕಾಯ್ದೆ ಉಲ್ಲಂಘನೆಗೆ ಬಳಸಿರುವುದು ಸ್ಪಷ್ಟವಾಗಿರುತ್ತದೆ.

ಅಲ್ಲದೇ, ಪ್ರಕರಣವನ್ನು ದಾಖಲುಪಡಿಸಿ ಈಗಾಗಲೇ ಆರು ತಿಂಗಳು ಕಳೆದಿದ್ದರೂ ಹಾಗೂ ಈ ಪ್ರಾಧಿಕಾರವು ನೀಡಲಾಗಿದ್ದ ಕಾರಣ ಕೇಳಿ ನೋಟೀಸನ್ನು ವಾಹನ ಮಾಲೀಕರು ಸ್ವೀಕರಿಸಿ ಸುಮಾರು 1 ತಿಂಗಳು ಕಳೆದಿದ್ದರೂ, ಈವರೆಗೂ ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವು ತನ್ನದೆಂದು ಅದರ ಬಿಡುಗಡೆಗೆ ಕೋರದೇ ಇರುವುದನ್ನು ಗಮನಿಸಿದಾಗ ವಾಹನ ಮಾಲೀಕರು ತಮ್ಮ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಚಟುವಟಿಕೆಗೆ ಬಳಸಿರುತ್ತಾರೆಂದು ಪ್ರಾಧಿಕಾರವು ಭಾವಿಸಬೇಕಾಗುತ್ತದೆ. ಹಾಗೂ ಈ ಪ್ರಕರಣವನ್ನು ನಡೆಸಲು ವಾಹನ ಮಾಲೀಕರಿಗೆ ಯಾವುದೇ ಉತ್ಸಾಹ ಇಲ್ಲವೆಂದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಮೇಲಿನ ಪುರಾವೆಗಳಿಂದ ಹಾಗೂ ಪ್ರಾಧಿಕಾರದ ಮುಂದೆ ಲಭ್ಯವಿರುವ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ವಾಹನವನ್ನು ಅಕ್ರಮ ಸಾರಾಯಿ ತೊಟ್ಟೆಗಳ ಸಾಗಾಣಿಕೆಗೆ ಬಳಸಿರುವುದು ಸ್ಪಷ್ಟವಾಗಿ ಮೇಲ್ನೋಟಕ್ಕೆ ಸಾಬೀತಾಗಿದ್ದು, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಹಾಗೂ ಸದರಿ ವಾಹನವನ್ನು ತೆರೆದ ಸ್ಥಳದಲ್ಲಿ ನಿಲ್ಲಿಸಿದ್ದು

ಬಿಸಿಲು, ಮಳೆಗೆ ತುಕ್ಕು ಹಿಡಿದು ಹಾಳಾಗುವ ಸಾಧ್ಯತೆಗಳಿರುವುದರಿಂದ ಸರ್ಕಾರದ ಆರ್ಥಿಕ ಹಿತದೃಷ್ಟಿಯಿಂದ ಮೊಕದ್ದಮೆಯಲ್ಲಿ ವಶಪಡಿಸಿಕೊಂಡಿರುವ ಸಾರಾಯಿ ತೊಟ್ಟೆಗಳನ್ನು ಮತ್ತು ಅಂಬಾಸಿಡರ್ ಕಾರು ಸಂಖ್ಯೆ: ಸಿಟಿಎ-9797ನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 (ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವುದರಿಂದ ಈ ಕೆಳಗಿನ ಆದೇಶ.

**ಆದೇಶ**

ಶ್ರೀ ಎನ್.ಎಂ. ಹುಸೇನ್ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಎ) 2 ರನ್ವಯ ಅಬಕಾರಿ ಉಪ ನಿರೀಕ್ಷಕರು, ಬಂಟ್ವಾಳ ಮೂಡ ಉಪ ವಲಯರವರ ಮೊಕದ್ದಮೆ ಸಂಖ್ಯೆ: 3/2003-04 ದಿನಾಂಕ: 11.3.2004 ರಲ್ಲಿ ಜಪ್ತುಪಡಿಸಿರುವ ವಾಹನ ಅಂಬಾಸಿಡರ್ ಕಾರು ಸಂಖ್ಯೆ: ಸಿಟಿಎ-9797ನ್ನು ಮತ್ತು 100 ಎಂಎಲ್‌ನ 5000 ಸಾರಾಯಿ ತೊಟ್ಟೆಗಳಲ್ಲಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಸಾರಾಯಿ ತೊಟ್ಟೆಗಳನ್ನು ಹೊರತುಪಡಿಸಿ ಉಳಿದ ಸಾರಾಯಿ ತೊಟ್ಟೆಗಳನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ಸಾರಾಯಿ ತೊಟ್ಟೆಗಳಲ್ಲಿ ಜಪ್ತು ಮಾಡಲಾಗಿರುವ ಸಾರಾಯಿ ತೀಕ್ಷ್ಣತೆ, ತೀರ ಕಡಿಮೆ ಪ್ರಮಾಣದಲ್ಲಿರುವುದಾಗಿ ರಾಸಾಯನಿಕ ವಿಶ್ಲೇಷಕರ ವರದಿಯಿಂದ ದೃಢಪಟ್ಟಿರುವುದರಿಂದ ಹಾಗೂ ಸದ್ರಿ ಅಕ್ರಮ ಸಾರಾಯಿ ಸರ್ಕಾರದ ಅಧಿಕೃತ ಉತ್ಪಾದನಾ ಘಟಕದಿಂದ ತಯಾರಾಗಿರುವ ಬಗ್ಗೆ ಯಾವುದೇ ಆಧಾರಗಳಿಲ್ಲದಿರುವುದರಿಂದ ಅಂತಹ ಅಕ್ರಮ ಸಾರಾಯಿಯನ್ನು ಸಾರ್ವಜನಿಕರ ಸೇವನೆಗೆ ನೀಡುವುದು ಸೂಕ್ತವಾಗದಿರುವ ಅಂಶವನ್ನು ಪರಿಗಣಿಸಿ, ಮುಟ್ಟುಗೋಲು ಹಾಕಿಕೊಳ್ಳಲಾಗಿರುವ 100 ಮಿಲಿಯ 5000 ಸಾರಾಯಿ ಸ್ಯಾಚೆಟ್‌ಗಳನ್ನು ಅಬಕಾರಿ ನಿಯಮ ಕಲಂ 43(ಎ) 3ರನ್ವಯ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರ ಸಮಕ್ಷಮ ಸೂಕ್ತ ಮಹಜರು ಜರುಗಿಸಿ ನಾಶಪಡಿಸಲು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 25.09.2004 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಪಿ.ಆರ್. 1498 ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/42/ಡಿಟಿಸಿಆರ್/2003-2004, ದಿನಾಂಕ: 24ನೇ ಸೆಪ್ಟೆಂಬರ್ 2004**

**ಉಪಸ್ಥಿತರು:** ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದಿದಾರರು:** ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ, ಬೆಳ್ತಂಗಡಿ.

**ವಿರುದ್ಧ**

**ಆರೋಪಿಗಳು:**
1) ರಾಧಾಕೃಷ್ಣ ಗೌಡ, ಬಿನ್ ಕಾಂತಪ್ಪ ಗೌಡ, ಕಲ್ಲಂಗೇರಿ ಮನೆ, ಕೊಕ್ಕಡ ಗ್ರಾಮ, ಬೆಳ್ತಂಗಡಿ
2) ವಿಶ್ವನಾಥ ಪೂಜಾರಿ ಬಿನ್ ರಾಮಪ್ಪ ಪೂಜಾರಿ ಯಾನೆ ಸೂರಪ್ಪ ಪೂಜಾರಿ, ಕೊಲ್ಲಾಜೆ ಮನೆ, ಕೊಕ್ಕಡ ಗ್ರಾಮ, ಬೆಳ್ತಂಗಡಿ.
3) ರವಿ ಶೆಟ್ಟಿ ಬಿನ್ ಜತ್ತಪ್ಪ ಶೆಟ್ಟಿ, ಪೆರ್ಲಾ ಮನೆ, ಶಿಬಾಜೆ ಗ್ರಾಮ, ಬೆಳ್ತಂಗಡಿ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 28.8.2003 ರಂದು ಬೆಳ್ತಂಗಡಿ ವಲಯ ಅಬಕಾರಿ ನಿರೀಕ್ಷಕರು ತಮ್ಮ ಸಿಬ್ಬಂದಿಯವರೊಂದಿಗೆ ಕೊಕ್ಕಡ ಶಿಶಿಲ ರಸ್ತೆಯಲ್ಲಿ ರಸ್ತೆಗಾವಲು ನಡೆಸುತ್ತಿರುವಾಗ ಕೊಕ್ಕಡದ ಕಡೆಯಿಂದ ಶಿಶಿಲ ಕಡೆಗೆ ವೇಗವಾಗಿ ಒಂದು ಜೀಪ್ ಬರುತ್ತಿರುವುದನ್ನು ಕಂಡು ನಿಲ್ಲಿಸಲು ಸೂಚನೆ ನೀಡಿದಾಗ, ಚಾಲಕನು ಸಮವಸ್ತ್ರದಲ್ಲಿದ್ದ ಅಧಿಕಾರಿಗಳನ್ನು ಕಂಡು ಗಲಿಬಿಲಿಯಿಂದ ಜೀಪನ್ನು 30 ಗಜ ದೂರದಲ್ಲಿ ನಿಲ್ಲಿಸಿ ಇಬ್ಬರು ಓಡಿಹೋದರು. ಚಾಲಕನು ಜೀಪಿನಿಂದ ಇಳಿದು ಕೆಳಗೆ ಬಿದ್ದು ಅಧಿಕಾರಿಗಳ ವಶಕ್ಕೆ ಸಿಕ್ಕಿರುತ್ತಾನೆ. ಆತನನ್ನು ಹಿಡಿದುಕೊಂಡು ಸದ್ರಿ ಜೀಪಿನ ಹಿಂಭಾಗದ ಸೀಟಿನ ಬಳಿ ಬಂದಾಗ ಸಾರಾಯಿ ವಾಸನೆ ಬರುವ 2 ತುಂಬಿದ ಪ್ಲಾಸ್ಟಿಕ್ ಗೋಣಿ ಚೀಲಗಳು ಕಂಡು ಬಂತು. ಸದರಿ ಗೋಣಿ ಚೀಲಗಳನ್ನು ಪರಿಶೀಲಿಸಿದಾಗ ತಲಾ 400 ರಂತೆ 800 ಸಾರಾಯಿ ತೊಟ್ಟೆಗಳು ಇರುವುದು ಕಂಡು ಬಂತು. ಸಾರಾಯಿಯನ್ನು ಸಾಗಿಸಲು ರಹದಾರಿ ಪತ್ರ ಇದೆಯೇ ಎಂದು ವಿಚಾರಿಸಿದಾಗ ತನ್ನಲ್ಲಿ ಯಾವುದೇ ರಹದಾರಿ ಪತ್ರ ಇಲ್ಲವೆಂದು ತಿಳಿಸಿರುತ್ತಾನೆ. ಓಡಿಹೋದ ಇಬ್ಬರು ವ್ಯಕ್ತಿಗಳ ಹೆಸರನ್ನು ವಿಚಾರಿಸಿದಾಗ, ಒಬ್ಬ ವಿಶ್ವನಾಥ ಪೂಜಾರಿ ಬಿನ್ ರಾಮಪ್ಪ ಪೂಜಾರಿ ಯಾನೆ ಸೂರಪ್ಪ ಪೂಜಾರಿ, ಕೊಲ್ಲಾಜೆ ಮನೆ, ಕೊಕ್ಕಡ ಗ್ರಾಮ, ಬೆಳ್ತಂಗಡಿ ಮತ್ತು ಇನ್ನೊಬ್ಬ ರವಿ ಶೆಟ್ಟಿ, ಬಿನ್ ಜತ್ತಪ್ಪ ಶೆಟ್ಟಿ, ಪೆರ್ಲಾ ಮನೆ, ಶಿಬಾಜೆ ಗ್ರಾಮ, ಬೆಳ್ತಂಗಡಿ ಎಂದು ತಿಳಿಸಿರುತ್ತಾನೆ. ತಾನು ರಾಧಕೃಷ್ಣ ಗೌಡ ಬಿನ್ ಕಾಂತಪ್ಪ ಗೌಡ, ಕಲ್ಲಂಗೇರಿ ಮನೆ, ಕೊಕ್ಕಡ ಗ್ರಾಮ, ಬೆಳ್ತಂಗಡಿ ಎಂದು ತಿಳಿಸಿರುತ್ತಾನೆ. ಸದರಿ ಸಾರಾಯಿ ತೊಟ್ಟೆಗಳನ್ನು ಮಾರಾಟ ಮಾಡಲು ಸಾಗಾಣಿಕೆ ಮಾಡಿರುವುದಾಗಿ ತಿಳಿಸಿದ್ದು, ಉಳಿದ ಸಾರಾಯಿ ತೊಟ್ಟೆಗಳನ್ನು ಪರಿಶೀಲಿಸಿದಾಗ ಇದು ಕರ್ನಾಟಕ ಸರ್ಕಾರದ ಸಾರಾಯಿ 100 ಎಂ.ಎಲ್.ನ 35 ಡಿಗ್ರಿ ಯು.ಪಿ. ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಿದ್ದು, ಇದು ಮೆ: ಮೈ ಶುಗರ್ ಕಂಪೆನಿ, ಸಾರಾಯಿ ಸಂಸ್ಕರಣಾ ಘಟಕ, ದ.ಕ. ಜಿಲ್ಲೆ, ಮಂಗಳೂರು ಮದ್ಯಪಾನ ಆರೋಗ್ಯಕ್ಕೆ ಹಾನಿಕಾರ ಎಂಬುವುದಾಗಿ ಕೆಂಪು ಅಕ್ಷರದಲ್ಲಿ ಮುದ್ರಿತವಾಗಿರುತ್ತದೆ. ಸದರಿ ತೊಟ್ಟೆಗಳಿಂದ 10 ಸಾರಾಯಿ ತೊಟ್ಟೆಗಳನ್ನು ರಾಸಾಯನಿಕ ಪರೀಕ್ಷೆಗೆ ಪ್ರತ್ಯೇಕಿಸಿ ಒಂದು ಲಕೋಟೆಯಲ್ಲಿ ಹಾಕಿ ದಾರ ಕಟ್ಟಿ ಇಲಾಖೆಯ ಮೊಹರು ಮಾಡಿರುತ್ತಾರೆ. ಸಾರಾಯಿ ತೊಟ್ಟೆಗಳ ಗುರುತಿನ ಚೀಟಿಯನ್ನು ತಯಾರಿಸಿ ಸ್ಯಾಂಪಲ್ ತೊಟ್ಟೆಗಳಿಗೆ ಹಾಗೂ ಸೊತ್ತುಗಳಿಗೆ ಅಂಟಿಸಿರುತ್ತಾರೆ. ನಂತರ ಮಾದರಿ ಮೊಹರಿನ ಹಾಳೆಯನ್ನು ತಯಾರಿಸಿ ಪಂಚರ ಸಹಿ ಪಡೆದಿರುತ್ತಾರೆ. ಮಹಜರನ್ನು ಸ್ಥಳದಲ್ಲೇ ಬರೆದು ಸಾಗಾಣಿಕೆಗೆ ಬಳಸಿದ ಜೀಪನ್ನು ಮತ್ತು ಸಾರಾಯಿ ತೊಟ್ಟೆಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ವಶಪಡಿಸಿಕೊಂಡು, ಆರೋಪಿಯನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಆರೋಪಿಯ ವಿರುದ್ಧ ಮೊಕದ್ದಮೆ ಸಂಖ್ಯೆ: 3/2003-04 ದಿನಾಂಕ: 28.8.2003 ರಂದು ದಾಖಲಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ವರದಿ ಸಲ್ಲಿಸಿರುತ್ತಾರೆ.

ತನಿಖಾಧಿಕಾರಿಯಾದ ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯರವರು ಪ್ರಕರಣದ ತನಿಖೆಯನ್ನು ಕೈಗೊಂಡು ಪ್ರಕರಣದ ಮಾದರಿ ಸಾರಾಯಿ ತೊಟ್ಟೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ ರಾಸಾಯನಿಕ ತಜ್ಞರ ವರದಿಯಲ್ಲಿ ಸಾರಾಯಿ ತೊಟ್ಟೆಗಳ ಮದ್ಯಸಾರ ಪ್ರಮಾಣ ಶೇಕಡಾ 27.10 ವಿದ್ದು 52 ಡಿಗ್ರಿ ಯು.ಪಿ. ಪತ್ತೆಯಾಗಿದ್ದು, ಸಾರಾಯಿಯು ಮಾನವನ ಸೇವನೆಗೆ ಯೋಗ್ಯವಿಲ್ಲವೆಂದು ದೃಢೀಕರಣ ಪತ್ರ ನೀಡಿರುವ ಮೇರೆಗೆ ವಶಪಡಿಸಿಕೊಂಡ ಸಾರಾಯಿ ತೊಟ್ಟೆಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ದಿನಾಂಕ: 27.11.2003 ರಂದು ಪ್ರಾಧಿಕಾರವು ಆದೇಶ ನೀಡಿರುತ್ತದೆ.

ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಮಹೇಂದ್ರ ಜೀಪಿನ ವಾರಸುದಾರರನ್ನು ಪತ್ತೆ ಹಚ್ಚಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ಇವರಿಗೆ ಪತ್ರ ಬರೆಯಲಾಗಿದ್ದು, ಸದರಿ ಪತ್ರಕ್ಕೆ ಉತ್ತರವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ಇವರು ವಾಹನದ 'ಬಿ' ಅಬ್‌ಸ್ಟ್ರಾಕ್ಟ್‌ನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ 'ಬಿ' ಅಬ್‌ಸ್ಟ್ರಾಕ್ಟ್ ವರದಿಯ ಪ್ರಕಾರ ವಾಹನದ ಮಾಲೀಕ ಶ್ರೀ ಎ.ಎನ್. ಇಸ್ಮಾಯಿಲ್ ಬಿನ್ ಅಹಮ್ಮದ್ ಕುನ್ನಿ, ಕೊಕ್ಕಡ ಪೋಸ್ಟ್, ಬೆಳ್ತಂಗಡಿ ಇವರಿಗೆ ಪ್ರಾಧಿಕಾರವು ದಿನಾಂಕ: 8.6.2004 ರಂದು ಕಾರಣ ಕೇಳಿ ನೋಟೀಸು ನೀಡಲಾಗಿದ್ದು, ಸದರಿ ಕಾರಣ ಕೇಳಿ ನೀಡಿದ ನೋಟೀಸು ದಿನಾಂಕ: 11.6.2004 ರಂದು ವಾಹನ ಮಾಲೀಕರಿಗೆ ತಲುಪಿದ ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ತಲುಪಿರುತ್ತದೆ. ವಾಹನ ಮಾಲೀಕರು ನೋಟೀಸು ತಲುಪಿ 3 ತಿಂಗಳು ಕಳೆದರೂ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಬಿಡುಗಡೆಗೆ ಕೋರಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ರಡಿಯಲ್ಲಿ ಪ್ರಕರಣ ದಾಖಲು ಮಾಡುವಾಗ ಅಪರಾಧಿ ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳಿಲ್ಲದ್ದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಸೊತ್ತುಗಳನ್ನು ತಮ್ಮದೆಂದು, ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾಧ್ಯಾರಗಳೊಂದಿಗೆ ಹಾಜರಾಗದೇ ಇದ್ದಲ್ಲಿ ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗದಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಪ್ರಾಧಿಕಾರವು ಸಾರಾಯಿ ಮತ್ತು ಸಾಗಾಣಿಕೆಗೆ ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣವು ದಾಖಲುಪಡಿಸಿ ಸುಮಾರು ಒಂದು ವರ್ಷ ಕಳೆದಿದ್ದರೂ ಜಪ್ತುಪಡಿಸಲಾಗಿರುವ ವಾಹನ ಮಾಲೀಕರಿಗೆ ಕಾರಣ ಕೇಳಿ ನೋಟೀಸನ್ನು ಜಾರಿ ಮಾಡಿ, ನೋಟೀಸು ಸ್ವೀಕೃತಿಗೊಂಡು 3 ತಿಂಗಳು ಕಳೆದಿದ್ದರೂ ವಾಹನವು ತಮ್ಮದೆಂದು ಕೋರಿ ವಾಹನದ ಬಿಡುಗಡೆಗೆ ಈ ಪ್ರಾಧಿಕಾರದ ಮುಂದೆ ವಾಹನ ಮಾಲೀಕರು ಹಾಜರಾಗಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ದಿನಾಂಕ: 28.8.2003 ರಂದು ಆರೋಪಿಗಳು 100 ಎಂಎಲ್‌ನ 800 ಸಾರಾಯಿ ಸ್ಯಾಚೆಟ್‌ಗಳನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿದ್ದಾಗ ಬೆಳ್ತಂಗಡಿ ವಲಯದ ಅಬಕಾರಿ ನಿರೀಕ್ಷಕರು ಸ್ಥಳ ಮಹಜರಿನೊಂದಿಗೆ ಅಕ್ರಮ ಸೊತ್ತುಗಳನ್ನು ಹಾಗೂ ಸಾಗಾಟಕ್ಕೆ ಉಪಯೋಗಿಸಲಾಗಿದ್ದ ಜೀಪನ್ನು ವಶಪಡಿಸಿಕೊಂಡಿರುತ್ತಾರೆ. ವಾಹನದಲ್ಲಿ ಅಕ್ರಮವಾಗಿ ಸಾರಾಯಿಯನ್ನು ಸಾಗಾಣೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ, ಹಾಗೂ ವಾಹನವನ್ನು ಅಬಕಾರಿ ಕಾಯ್ದೆ ಉಲ್ಲಂಘನೆಗೆ ಬಳಸಿರುವುದು ಸ್ಪಷ್ಟವಾಗಿರುತ್ತದೆ.

ಅಲ್ಲದೇ, ಪ್ರಕರಣವನ್ನು ದಾಖಲುಪಡಿಸಿ ಈಗಾಗಲೇ ಒಂದು ವರ್ಷ ಕಳೆದಿದ್ದರೂ ಹಾಗೂ ಈ ಪ್ರಾಧಿಕಾರವು ನೀಡಲಾಗಿದ್ದ ಕಾರಣ ಕೇಳಿ ನೋಟೀಸನ್ನು ವಾಹನ ಮಾಲೀಕರು ಸ್ವೀಕರಿಸಿ ಸುಮಾರು 1 ತಿಂಗಳು ಕಳೆದಿದ್ದರೂ, ಈವರೆಗೂ ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವು ತನ್ನದೆಂದು ಅದರ ಬಿಡುಗಡೆಗೆ ಕೋರದೇ ಇರುವುದನ್ನು ಗಮನಿಸಿದಾಗ ವಾಹನ ಮಾಲೀಕರು ತಮ್ಮ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಚಟುವಟಿಕೆಗೆ ಬಳಸಿರುತ್ತಾರೆಂದು ಪ್ರಾಧಿಕಾರವು ಭಾವಿಸಬೇಕಾಗುತ್ತದೆ. ಹಾಗೂ ಈ ಪ್ರಕರಣವನ್ನು ನಡೆಸಲು ವಾಹನ ಮಾಲೀಕರಿಗೆ ಯಾವುದೇ ಉತ್ಸಾಹ ಇಲ್ಲವೆಂದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಮೇಲಿನ ಪುರಾವೆಗಳಿಂದ ಹಾಗೂ ಪ್ರಾಧಿಕಾರದ ಮುಂದೆ ಲಭ್ಯವಿರುವ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ವಾಹನವನ್ನು ಅಕ್ರಮ ಮದ್ಯ ಮತ್ತು ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಸ್ಪಷ್ಟವಾಗಿ ಮೇಲ್ನೋಟಕ್ಕೆ ಸಾಬೀತಾಗಿದ್ದು, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಸದರಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಮಹೇಂದ್ರ ಜೀಪ್ ಸಂಖ್ಯೆ: ಸಿಟಿಎಕ್ಸ್-7001ನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 (ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವುದರಿಂದ ಈ ಕೆಳಗಿನ ಆದೇಶ.

**ಆದೇಶ**

ಶ್ರೀ ಎನ್.ಎಂ. ಹುಸೇನ್ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಎ) 2 ರನ್ವಯ ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯರವರ ಮೊಕದ್ದಮೆ ಸಂಖ್ಯೆ: 3/2003-04 ದಿನಾಂಕ: 28.8.2003 ರಲ್ಲಿ ಜಪ್ತುಪಡಿಸಿರುವ ವಾಹನ ಮಹೇಂದ್ರ ಪೆಟ್ರೋಲ್ ಚಾಲಿತ ಜೀಪ್ ಸಂಖ್ಯೆ: ಸಿಟಿಎಕ್ಸ್-7001ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 24.09.2004 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಪಿ.ಆರ್. 1499 ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ ಸಂಖ್ಯೆ: ಎಸ್‌ಡಿಕೆ/381/ಡಿಟಿಸಿಆರ್/1999-2000, ದಿನಾಂಕ: 7ನೇ ಅಕ್ಟೋಬರ್ 2004**

**ಉಪಸ್ಥಿತರು:** ಗೋವಿಂದಪ್ಪ ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದಿದಾರರು:** ಅಬಕಾರಿ ಉಪ ನಿರೀಕ್ಷಕರು, ನಂ.5, ಅಬಕಾರಿ ಗುಪ್ತ ವಾರ್ತಾದಳ, ಮಂಗಳೂರು ವಿಭಾಗ, ಮಂಗಳೂರು.

ವಿರುದ್ಧ

**ಆರೋಪಿಗಳು:**
1) ಶ್ರೀ ಬಾಬು ಬಿನ್ ಸುಕುಮಾರ್ ಪಿಳ್ಳೆ, ಎರಕುನ್ನು ಹೌಸ್, ಪರಪ್ಪ ಅಂಚೆ, ಕಾಸರಗೋಡು ಜಿಲ್ಲೆ, ಕೇರಳ ರಾಜ್ಯ.
2) ಸುಭೀರ್ ಬಿನ್ ಹಸೈನಾರ್, ಪರಂಬತ್ತ ಹೌಸ್, ಜಾರಪ್ಪುರ, ನೀಲೇಶ್ವರ, ಹೊಸದುರ್ಗ ತಾಲ್ಲೂಕು, ಕಾಸರಗೋಡು ಜಿಲ್ಲೆ, ಕೇರಳ.
3) ಬಿ. ಉಮೇಶ್ ಪೈ ಬಿನ್ ಗೋಪಾಲಕೃಷ್ಣ ಪೈ, ಗೋಪಾಲ ಎಕ್ಸ್‌ಪ್ರೆಸ್ಸ್, ಪೋರ್ಟ್‌ಕ್ರಾಸ್ ರೋಡ್, ಬಂದರ್, ಮಂಗಳೂರು.

**ಅರ್ಜಿದಾರರು:** ಶ್ರೀ ಬಿ. ಉಮೇಶ್ ಪೈ ಬಿನ್ ಗೋಪಾಲಕೃಷ್ಣ ಪೈ, ಗೋಪಾಲ ಎಕ್ಸ್‌ಪ್ರೆಸ್ಸ್, ಪೋರ್ಟ್ ಕ್ರಾಸ್ ರೋಡ್, ಬಂದರ್, ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 22.12.99 ರಂದು ಸಂಜೆ 5.00 ಗಂಟೆಗೆ ಮಂಗಳೂರು ಮಹಾನಗರದ ಕದ್ರಿ ಪಾಲಿಟೆಕ್ನಿಕ್ ಬಳಿ ಅಬಕಾರಿ ಉಪ ನಿರೀಕ್ಷಕರು, ಗುಪ್ತವಾರ್ತಾದಳ, ಮಂಗಳೂರು ವಿಭಾಗ, ಮಂಗಳೂರು ಇವರು ಅಬಕಾರಿ ಉಪ ಅಧೀಕ್ಷಕರು ತಮ್ಮ ಸಿಬ್ಬಂದಿಯೊಂದಿಗೆ ಅಬಕಾರಿ ಉಪ ಅಧೀಕ್ಷಕರು ಗುಪ್ತವಾರ್ತಾದಳ ಇವರ ನೇತೃತ್ವದಲ್ಲಿ ರಸ್ತೆಗಾವಲು ನಡೆಸುತ್ತಿರುವ ಸಮಯ ಕೂಳೂರು ಕಡೆಯಿಂದ ಕದ್ರಿ ಕಡೆಗೆ ಬರುತ್ತಿದ್ದ ಕಂಟೈನರ್ ಲಾರಿ ಸಂಖ್ಯೆ: ಕೆಎ-19-5804ನ್ನು ತಡೆದು ನಿಲ್ಲಿಸಿ ವಿಚಾರ ಮಾಡಲಾಗಿ ಲಾರಿಯ ಚಾಲಕನು ಲಾರಿಯಲ್ಲಿ ಯಾವುದೇ ಸರಕು ಇಲ್ಲವೆಂದು ತಿಳಿಸಿರುತ್ತಾನೆ. ಕಂಟೈನರ್ ಬಾಗಿಲನ್ನು ತೆಗೆದು ತೋರಿಸುವಂತೆ ಸೂಚಿಸಲಾಗಿ ಚಾಲಕನು ಬಾಗಿಲನ್ನು ತೆರೆದು ತೋರಿಸಲಾಗಿ ಕಂಟೈನರ್ ಖಾಲಿಯಿದ್ದು ಸಂಶಯದಿಂದ ಕಂಟೈನರ್‌ನ ಹೊರ ಮತ್ತು ಒಳ ಅಳತೆಯನ್ನು ನೋಡಿದಾಗ ಕಂಟೈನರ್‌ನ ಒಳ ತಳ ಅಳತೆಯು ಮೂರು ಅಡಿ ಕಡಿಮೆಯಿದ್ದುದು ಕಂಡುಬಂದಿದ್ದು ಮೇಲ್ಭಾಗಕ್ಕೆ ಹೋಗಿ ನೋಡಲಾಗಿ ಒಂದು ಬದಿಯಲ್ಲಿ ಅಲ್ಯೂಮಿನಿಯಂ ತಗಡನ್ನು ಸ್ಕ್ರೂಗಳಿಂದ ಮುಚ್ಚಲಾಗಿದ್ದು, ತಗಡನ್ನು ತೆಗೆದು ನೋಡಿದಾಗ ಅದರಲ್ಲಿ ಒಂದು ಟ್ಯಾಂಕನ್ನು ಅಳವಡಿಸಿರುವುದು ಕಂಡುಬಂದಿದ್ದು ಟ್ಯಾಂಕಿಗೆ ಹೊಂದಿಕೊಂಡಿರುವ ವಾಲ್‌ನ್ನು ತೆರೆದು ನೋಡಿದಾಗ ಅದಲ್ಲಿ ಘಾಟು ವಾಸನೆಯಿಂದ ಕೂಡಿದ ಮದ್ಯಸಾರವಿರುವುದು ಕಂಡು ಬಂತು. ಸದ್ರಿ ಟ್ಯಾಂಕಿನಲ್ಲಿ ಸುಮಾರು 3000 ಲೀಟರು ಮದ್ಯಸಾರವಿದ್ದು ಈ ಬಗ್ಗೆ ಲಾರಿಯ ಚಾಲಕನನ್ನು ವಿಚಾರಿಸಲಾಗಿ ಆತನಲ್ಲಿ ಯಾವುದೇ ರಹದಾರಿಯಿರುವುದಿಲ್ಲವೆಂದು ತಿಳಿಸಿರುತ್ತಾನೆ. ನಂತರ ಮುಂದಿನ ಕ್ರಮಕ್ಕಾಗಿ ಅದೇ ದಾರಿಯಲ್ಲಿ ಬರುತ್ತಿದ್ದ ಪಂಚಾಯತುದಾರರುಗಳ ಸಮಕ್ಷಮ ಲಾರಿಯನ್ನು ಜಪ್ತು ಪಡಿಸಲು ನ್ಯಾಯಾಲಯದಿಂದ ವಾರೆಂಟನ್ನು ಪಡೆದುಕೊಳ್ಳಲು ಕಾಲಾವಕಾಶವಿಲ್ಲದ್ದ ಕಾರಣ ಸರ್ಚ್ ಮೆಮೋ ತಯಾರಿಸಿ ಲಾರಿಯನ್ನು ತಪಾಸಣೆ ಮಾಡಿದಾಗ ವಿಶೇಷವಾಗಿ ಅಳವಡಿಸಲಾದ ಕಂಪಾರ್ಟ್‌ಮೆಂಟಿನಲ್ಲಿ ಸುಮಾರು 3000 ಲೀಟರು ಮದ್ಯಸಾರ ಇರುವುದು ಕಂಡುಬಂದಿದ್ದು, ಕಂಪಾರ್ಟ್‌ಮೆಂಟಿನ ಕೆಳಭಾಗದಲ್ಲಿ ಅಳವಡಿಸಿದ್ದ ವಾಲ್‌ನಿಂದ ರಾಸಾಯನಿಕ ಪರೀಕ್ಷೆಗಾಗಿ 750 ಮಿಲಿಯಲ್ಲಿ ಶೀಷೆಗಳಲ್ಲಿ ಮಾದರಿ ತೆಗೆದು ಬಾಟ್ಲಿಗಳನ್ನು ಬಟ್ಟೆದಾರ ಕಟ್ಟಿ ಇಲಾಖೆಯ ಸೀಲಿನಿಂದ ಸೀಲು ಮಾಡಲಾಯಿತು ಹಾಗೂ ಕಂಪಾರ್ಟ್‌ಮೆಂಟಿನ ವಾಲಿಗೂ ಸೀಲು ಮಾಡಿ ಹಾಜರಿದ್ದ ಆರೋಪಿಗಳ ಹೆಸರು ವಿಳಾಸ ಕೇಳಲಾಗಿ ಚಾಲಕನು ತನ್ನ ಹೆಸರು ಬಾಬು ಬಿನ್ ಸುಕುಮಾರ್ ಪಿಳ್ಳೆ, ಪ್ರಾಯ: 30 ವರ್ಷ ಎರಕುನ್ನು ಹೌಸ್, ಪರಪ್ಪ ಅಂಚೆ, ಕಾಸರಗೋಡು ಜಿಲ್ಲೆ ಎಂದು ಇನ್ನೋರ್ವ ವ್ಯಕ್ತಿ ತನ್ನ ಹೆಸರು ಸುಭೀರ್ ಬಿನ್ ಹಸೈನಾರ್ ವಯಸ್ಸು 27 ವರ್ಷ, ಪರಂಬಿತ್ ಹೌಸ್, ನೀಲೇಶ್ವರ ಹೊಸದುರ್ಗ ತಾಲ್ಲೂಕು, ಕಾಸರಗೋಡು ಜಿಲ್ಲೆ ಎಂದು ತಿಳಿಸಿರುತ್ತಾನೆ. ವಾಹನಕ್ಕೆ ಸಂಬಂಧಿಸಿದ ನೋಂದಣಿ ಪುಸ್ತಕವನ್ನು ಪರಿಶೀಲಿಸಲಾಗಿ ವಾಹನದ ನೋಂದಣಿ ಸಂಖ್ಯೆ: ಕೆಎ-19-5804 ಆಗಿದ್ದು ಚಾಸಿಸ್ ನಂ: ಎಸ್‌ಯುಹೆಚ್-100209 ಹಾಗೂ ಇಂಜಿನ್ ಸಂಖ್ಯೆ: ಕ್ಯೂಎಇ:034114 ಇದ್ದು ಅಶೋಕ ಲೈಲಾಂಡ್ ತಯಾರಿಕೆಯು 1995ನೇ ಮಾಡೆಲ್ ಆಗಿರುತ್ತದೆ. ಮತ್ತು ಲಾರಿಯ ಮಾಲೀಕರು ಬಿ. ಉಮೇಶ್ ಪೈ ಬಿನ್ ಗೋಪಾಲ ಕೃಷ್ಣ ಪೈ ಆಗಿದ್ದು ಲಾರಿಯಲ್ಲಿ ಒಂದು ಬಿಡಿಚಕ್ರ ಹಾಗೂ ಜಾಕ್‌ಸೆಟ್ ಇರುತ್ತದೆ. ನಂತರ ಆರೋಪಿಗಳ ಹೆಸರು ವಿಳಾಸವಿರುವ ಚೀಟಿಗಳನ್ನು ಮಾದರಿ ಶೀಷೆಗಳಿಗೆ ಅಂಟಿಸಿ ರಹದಾರಿಯಿಲ್ಲದೇ ಮದ್ಯಸಾರವನ್ನು ಸಾಗಿಸುವುದು ಕರ್ನಾಟಕ ಅಬಕಾರಿ ಕಾಯ್ದೆ ಅನ್ವಯ ಅಪರಾಧವೆಂದು ಆರೋಪಿಗಳಿಗೆ ತಿಳಿಸಿ ಲಾರಿ ಮತ್ತು ಲಾರಿಯಲ್ಲಿದ್ದ ಮದ್ಯಸಾರವನ್ನು ಇಲಾಖೆ ವಶಕ್ಕೆ ತೆಗೆದುಕೊಂಡು ಇಬ್ಬರು ಆರೋಪಿಗಳನ್ನು ದಸ್ತಗಿರಿ ಮಾಡಿ ಸ್ಥಳದಲ್ಲಿಯೇ ಮಹಜರು ತಯಾರಿಸಿರುತ್ತಾರೆ. ನಂತರ ಇದು ಅಬಕಾರಿ ಕಾಯ್ದೆ ಕಲಂ 11, 14 ರಂತೆ ಅಪರಾಧವಾಗಿದ್ದು ಕಲಂ 34 ಮತ್ತು 38 ರೀತ್ಯಾ ಶಿಕ್ಷಾರ್ಹವಾಗಿರುವುದರಿಂದ ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ: 10/99-2000, ದಿನಾಂಕ: 22.10.99ರ ಮೂಲಕ ಮೊಕದ್ದಮೆ ದಾಖಲು ಪಡಿಸಿ ಪ್ರಥಮ ಮಾಹಿತಿ ವರದಿ ಮತ್ತು ಮಹಜರುಗಳನ್ನು ನ್ಯಾಯಾಲಯಕ್ಕೆ ಸಲ್ಲಿಸಿ, ಸದ್ರಿ ದಾಖಲೆ ಪ್ರತಿಗಳನ್ನು ಹಾಗೂ 43(ಎ) ಪ್ರಕಾರ ವರದಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿ ವಾಹನ ಮತ್ತು ಸ್ವತ್ತುಗಳನ್ನು ತಮ್ಮ ವಶದಲ್ಲಿ ಇಟ್ಟುಕೊಳ್ಳಲು ಅನುಮತಿ ಪಡೆದು ಪ್ರಕರಣದ ದಾಖಲೆ ಹಾಗೂ ಸ್ವತ್ತುಗಳನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯಕ್ಕೆ ಹಸ್ತಾಂತರಿಸಿರುತ್ತಾರೆ.

ನಂತರ ವಾಹನ ಮಾಲೀಕರಾದ ಉಮೇಶ್ ಪೈ ಇವರು ತಮ್ಮ ವಕೀಲರ ಮುಖಾಂತರ ದಿನಾಂಕ: 28.1.2000 ರಂದು ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ ವಾಹನವನ್ನು ವಾಹನ ಮಾಲೀಕರಾದ ತಮ್ಮ ಮಧ್ಯಂತರ ವಶಕ್ಕೆ ನೀಡಬೇಕೆಂದು ಕೋರಿರುತ್ತಾರೆ. ಪ್ರಾಧಿಕಾರವು ಅಪೇಕ್ಷಿಸಿದಲ್ಲಿ ಇಂಡೆಮಿನಿಟಿ ಬಾಂಡ್ ಹಾಗೂ ಜಮೀನನ್ನು ನೀಡುವುದಾಗಿ ತಿಳಿಸಿರುತ್ತಾರೆ.

ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿದ್ದ ಮದ್ಯಸಾರವು ರಾಸಾಯನಿಕ ತಜ್ಞರ ವರದಿಯಂತೆ 66 ಡಿಗ್ರಿ ಒಪಿ ತೀಕ್ಷ್ಣತೆಯನ್ನು ಹೊಂದಿದ್ದು ಮಾನವನ ಸೇವನೆಗೆ ಯೋಗ್ಯವಾಗಿರುವುದರಿಂದ ಪ್ರಾಧಿಕಾರವು ಜಪ್ತು ಪಡಿಸಲಾದ 3000 ಲೀಟರು ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸಾರಾಯಿ ತಯಾರಿಕೆಗಾಗಿ ಮೈಶುಗರ್ ಕಂಪೆನಿ, ಅಳಪೆ, ಮಂಗಳೂರು ಇವರಿಗೆ ಹಂಚಿಕೆ ಮಾಡಿ ದಿನಾಂಕ: 19.2.2000 ರಂದು ಆದೇಶ ನೀಡಿರುತ್ತದೆ. ಜಪ್ತು ಪಡಿಸಲಾದ ವಾಹನದ ಮಾಲೀಕರಿಗೆ ದಿನಾಂಕ: 3.10.2000 ರಂದು ಕಾರಣ ಕೇಳಿ ನೋಟೀಸನ್ನು ಪ್ರಾಧಿಕಾರವು ನೀಡಿರುತ್ತದೆ. ಪ್ರಾಧಿಕಾರವು ಕಾರಣ ಕೇಳಿ ನೀಡಿದ ನೋಟೀಸಿಗೆ ವಾಹನ ಮಾಲೀಕರು ದಿನಾಂಕ: 16.10.2000 ರಂದು ಉತ್ತರ ನೀಡಿರುತ್ತಾರೆ. ದಿನಾಂಕ: 15.12.2004 ರಂದು ಚಾಲಕ ಶ್ರೀ ಬಾಬು ಮತ್ತು ಸಿರಿಯಕ್ ಎಂಬುವರು ಮಂಗಳೂರಿನಿಂದ ಎರ್ನಾಕುಲಂಗೆ ಮೀನು ಸಾಗಾಣಿಕೆ ಮಾಡಲು ಕಿಲೋಮೀಟರಿಗೆ ರೂ.10/- ರಂತೆ ಬಾಡಿಗೆ ನೀಡುವುದಾಗಿ ತಿಳಿಸಿದ್ದರಿಂದ ಲಾರಿಯನ್ನು ಅವರಿಗೆ ನೀಡಿದ್ದಾಗಿ ತಿಳಿಸುತ್ತಾ ಅವರುಗಳು ತಮಗೆ ಲಾರಿಯನ್ನು ಹಿಂತಿರುಗಿಸದೇ ಇದ್ದುದರಿಂದ ಪೊಲೀಸರಿಗೆ ದೂರು ನೀಡಿರುವುದಾಗಿ ತಮ್ಮ ಲಾರಿಯು ಜಪ್ತಾಗಿರುವುದು ದಿನಪತ್ರಿಕೆಯಲ್ಲಿ ತಿಳಿದು ಬಂದಿರುತ್ತದೆ ಎಂದು ವಾಹನವು ತಮ್ಮ ತಿಳುವಳಿಕೆಗೆ ಬಾರದಂತೆ ಅಕ್ರಮ ಮದ್ಯಸಾರ ಸಾಗಾಣಿಕೆಗೆ ಬಳಸಲಾಗಿದೆಯೆಂದು ವಾಹನವನ್ನು ತಮ್ಮ ವಶಕ್ಕೆ ಬಿಡಲು ವಿನಂತಿಸಿರುತ್ತಾರೆ.

ಪ್ರಾಧಿಕಾರವು ಅರ್ಜಿದಾರರು ಮಧ್ಯಂತರ ವಶಕ್ಕೆ ವಾಹನವನ್ನು ಬಿಡುಗಡೆ ಮಾಡಲು ನೀಡಿದ್ದ ಅರ್ಜಿಯನ್ನು ಮನ್ನಿಸಿ 2,00,000 ರೂ.ಗಳ ಬ್ಯಾಂಕ್ ಗ್ಯಾರಂಟಿ ಹಾಗೂ ಇನ್ನಿತರ ಷರತ್ತುಗಳೊಂದಿಗೆ ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆಗೊಳಿಸಿ ದಿನಾಂಕ: 13.11.2000 ರಂದು ಆದೇಶ ನೀಡಿರುತ್ತದೆ. ಪ್ರಾಧಿಕಾರದ ಆದೇಶದ ವಿರುದ್ಧ ಅರ್ಜಿದಾರರು ಮಾನ್ಯ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದ್ದು, ಮಾನ್ಯ ಸತ್ರ ನ್ಯಾಯಾಲಯವು ಕ್ರಿಮಿನಲ್ ಅಪೀಲ್ ಸಂಖ್ಯೆ: 168/2000ರ ಮೂಲಕ ವಾಹನವನ್ನು 2,00,000 ರೂ.ಗಳ ಇಂಡೆಮಿನಿಟಿ ಬಾಂಡ್ ಪಡೆದು ಮತ್ತು ಇನ್ನಿತರ ಷರತ್ತುಗಳೊಂದಿಗೆ ಮಧ್ಯಂತರ ವಶಕ್ಕೆ ನೀಡಲು ಆದೇಶವನ್ನು ದಿನಾಂಕ: 27.11.2000 ರಂದು ಹೊರಡಿಸಿರುತ್ತದೆ. ಮಾನ್ಯ ಸತ್ರ ನ್ಯಾಯಾಲಯದ ಆದೇಶದ ವಿರುದ್ಧ ಪ್ರಾಧಿಕಾರವು ಸತ್ರ ನ್ಯಾಯಾಲಯದ ಆದೇಶಕ್ಕೆ ತಡೆಯಾಜ್ಞೆ ನೀಡಲು ರಾಜ್ಯ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿರುತ್ತದೆ. ಮಾನ್ಯ ಉಚ್ಚ ನ್ಯಾಯಾಲಯವು ಯಾವುದೇ ಆದೇಶವನ್ನು ನೀಡಿರುವುದಿಲ್ಲ ಮತ್ತು ಜಪ್ತು ಪಡಿಸಿದ ವಾಹನವು ಇಲಾಖೆಯ ವಶದಲ್ಲಿಯೇ ಇರುತ್ತದೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆ ಪರವಾಗಿ ಫಿರ್ಯಾದುದಾರರು, ತನಿಖಾಧಿಕಾರಿಗಳನ್ನು ವಿಚಾರಣೆಗೆ ಒಳಪಡಿಸಿ ಅವರುಗಳ ಹೇಳಿಕೆಯನ್ನು ಪಡೆಯಲಾಗಿದೆ. ಪ್ರತಿರಕ್ಷಾ ಪರ ಸಾಕ್ಷಿ ವಿಚಾರಣೆಗೆ ಹಲವು ಅವಕಾಶಗಳನ್ನು ನೀಡಿದ್ದರೂ ಪ್ರತಿರಕ್ಷಾ

ಸಾಕ್ಷಿಗಳನ್ನು ಅರ್ಜಿದಾರರ ಪರ ವಕೀಲರು ಹಾಜರುಪಡಿಸಿರುವುದಿಲ್ಲ. ಈ ಪ್ರಕರಣದಲ್ಲಿ ಸರ್ಕಾರದ ಪರ ಸಲ್ಲಿಸಲಾಗಿರುವ ಸಾಕ್ಷ್ಯಾಧ್ಯಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ: 22.12.99 ರಂದು ವಾಹನ ಲಾರಿ ಸಂಖ್ಯೆ: ಕೆಎ-19-5804 ರಲ್ಲಿ ಅಕ್ರಮವಾಗಿ ಮದ್ಯಸಾರವನ್ನು ಸಾಗಣೆ ಮಾಡಲಾಗಿದೆಯೇ?
2) ಅರ್ಜಿದಾರರು ವಶಪಡಿಸಿಕೊಂಡಿರುವ ವಾಹನದ ಮಾಲೀಕರು ತಾವೆಂದೂ ಮತ್ತು ತನ್ನ ತಿಳುವಳಿಕೆಗೆ ಬಾರದೇ ವಾಹನವನ್ನು ಅಕ್ರಮ ಮದ್ಯಸಾರದ ಸಾಗಾಣಿಕೆಗೆ ಉಪಯೋಗಿಸಲಾಗಿದೆ ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ?
3) ಜಪ್ತು ಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿ ಹಾಗೂ ದಾಖಲೆಗಳ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ-3:**

ಶ್ರೀ ಶಂಕರ ಮುಖಾರಿ, ಅಬಕಾರಿ ಉಪ ನಿರೀಕ್ಷಕರು, ಈ ಪ್ರಕರಣದ ಫಿರ್ಯಾದುದಾರರಾಗಿದ್ದು ದಿನಾಂಕ: 19.2.2004 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆ ನೀಡಿರುತ್ತಾರೆ. ತಾನು ದಿನಾಂಕ: 22.10.99 ರಂದು ಸಂಜೆ 5.30ಕ್ಕೆ ಮಂಗಳೂರು ನಗರದ ಕದ್ರಿಯಲ್ಲಿ ರಾಷ್ಟ್ರೀಯ ಹೆದ್ದಾರಿಯಲ್ಲಿ ರಸ್ತೆಗಾವಲು ನಡೆಸುತ್ತಿದ್ದಾಗ ಅದೇ ದಾರಿಯಾಗಿ ಬಂದ ಲಾರಿ ಸಂಖ್ಯೆ: ಕೆಎ-19-5804ನ್ನು ನಿಲ್ಲಿಸಿ ವಿಚಾರಿಸಲಾಗಿ ಲಾರಿಯಲ್ಲಿದ್ದ ಸಹಾಯಕನು ಕಂಟೈನರ್ ಹಿಂದಿನ ಬಾಗಿಲನ್ನು ತೆರೆದು ತೋರಿಸಿದನು. ಲಾರಿಯು ಖಾಲಿಯಿದ್ದು ಕಂಟೈನರ್ ಹೊರಭಾಗ ಹಾಗೂ ಒಳಭಾಗವನ್ನು ಅಳತೆಮಾಡಿ ನೋಡಲಾಗಿ ಒಳಭಾಗ 3 ಅಡಿಯಷ್ಟು ಕಡಿಮೆಯಿರುವುದು ಕಂಡುಬಂದಿದ್ದು, ಶೋಧನೆ ಮಾಡುವಾಗ ಕಂಟೈನರ್ ಮೇಲ್ಭಾಗದಲ್ಲಿ ಅಲ್ಯೂಮಿನಿಯಂ ಶೀಟನ್ನು ಸ್ಕ್ರೂನಿಂದ ಮುಚ್ಚಿದ್ದು ಅದನ್ನು ತೆಗೆದು ನೋಡಲಾಗಿ ಒಂದು ಕೊಳವೆಯಿರುವುದು ಕಂಡು ಬಂತು. ಅದನ್ನು ತೆಗೆದು ಸಡಿಲಿಸಿ ನೋಡಿದಾಗ ಕೊಳವೆಯಲ್ಲಿ ಮದ್ಯಸಾರದ ವಾಸನೆ ಬರುತ್ತಿತ್ತು. ಈ ಬಗ್ಗೆ ವಿಚಾರಿಸಲು ಚಾಲಕನು ಮದ್ಯಸಾರವಿರುವುದನ್ನು ಒಪ್ಪಿರುತ್ತಾನೆ. ಸಾಕ್ಷಿಗಾಗಿ ಅದೇ ದಾರಿಯಲ್ಲಿ ಬರುತ್ತಿದ್ದ ಇಬ್ಬರನ್ನು ಕರೆದು ಸಾಕ್ಷಿದಾರರಾಗಲು ಕೇಳಿದಾಗ ಒಪ್ಪಿದರು. ನಂತರ ಗುಪ್ತ ಟ್ಯಾಂಕನ್ನು ಪರಿಶೀಲಿಸಿದಾಗ ಅದರಲ್ಲಿ ಸುಮಾರು 3000 ಲೀಟರು ಮದ್ಯಸಾರವಿರಬಹುದೆಂದು ಅಂದಾಜಿಸಿ, ಈ ರೀತಿ ಹೊಂದಿರುವುದಕ್ಕೆ ರಹದಾರಿಯನ್ನು ಕೇಳಲಾಗಿ ತನ್ನ ಬಳಿ ರಹದಾರಿ ಇಲ್ಲವೆಂದು ತಿಳಿಸಿದ ಮೇಲೆ ಈ ರೀತಿ ಮದ್ಯಸಾರವನ್ನು ಹೊಂದುವುದು ಹಾಗೂ ಸಾಗಾಣಿಕೆ ಮಾಡುವುದು ಅಬಕಾರಿ ಕಾನೂನಿನಂತೆ ಅಪರಾಧವಾಗಿದೆ ಎಂದು ತಿಳಿಸಿ, ರಾಸಾಯನಿಕ ಪರೀಕ್ಷೆಯ ಸಲುವಾಗಿ 2 ಬಾಟ್ಲಿಗಳಲ್ಲಿ ತಲಾ 750 ಮಿಲಿ ತೆಗೆದು ಬಟ್ಟೆದಾರ ಕಟ್ಟಿ ಇಲಾಖಾ ಸೀಲಿನಿಂದ ಸೀಲು ಮಾಡಲಾಯಿತು. ಸ್ಥಳದಲ್ಲಿ ಮಹಜರು ತಯಾರಿಸಲಾಯಿತು ಮಹಜರಿನ ಮೂಲಕ ಲಾರಿಯನ್ನು ಸ್ವತ್ತು ಸಮೇತ ಇಲಾಖಾ ವಶಕ್ಕೆ ತೆಗೆದುಕೊಳ್ಳಲಾಯಿತು. ಲಾರಿಯಲ್ಲಿ 2 ಜನರು ಇದ್ದು, ಚಾಲಕನು ತನ್ನ ಹೆಸರು ಬಾಬು ಬಿನ್ ಸುಕುಮಾರ್ ಪಿಳ್ಳೆ, ಪ್ರಾಯ:30 ವರ್ಷ ಎರಕುನ್ನ ಹೌಸ್, ಕಾಸರಗೋಡು ಇನ್ನೊಬ್ಬ ಸುಭೀರ್ ಬಿನ್ ಹಸೈನಾರ್ ಪ್ರಾಯ:27 ವರ್ಷ ನೀಲೇಶ್ವರ, ಕಾಸರಗೋಡು ಎಂದು ಲಾರಿಯ ಮಾಲೀಕನ ಬಗ್ಗೆ ವಿಚಾರ ಮಾಡಲು ಲಾರಿಯಲ್ಲಿದ್ದ ಆರ್.ಸಿ. ಪ್ರಕಾರ ಮಾಲಿಕನ ಹೆಸರು ಉಮೇಶ್ ಪೈ ಬಿನ್ ಗೋಪಾಲ ಕೃಷ್ಣ, ಟ್ರಾನ್ಸ್‌ಪೋರ್ಟ್, ಬಂದರ್ ಎಂದು ಇರುವುದಾಗಿ, ವಾರೆಂಟ್ ಪಡೆಯಲು ಸಮಯಾವಕಾಶವಿಲ್ಲದಿದ್ದುದರಿಂದ ಕಾರಣವನ್ನು ನಮೂದಿಸಿ ಲಾರಿಯನ್ನು ತಪಾಸಣೆ ಮಾಡಿರುತ್ತೇನೆ. ವಾಹನಕ್ಕೆ ಸಂಬಂಧಿಸಿದ ಆರ್.ಸಿ. ಪುಸ್ತಕ, ಡ್ರೈವಿಂಗ್ ಲೈಸೆನ್ಸ್, ಟ್ಯಾಕ್ಸ್ ಕಾರ್ಡ್, ಇನ್ಸೂರೆನ್ಸ್ ಮುಂತಾದ ದಾಖಲೆಗಳನ್ನು ವಶಕ್ಕೆ ಪಡೆದುಕೊಂಡೆನು. ಅಲ್ಲದೆ ಲಾರಿಯಲ್ಲಿದ್ದ ಚಾಕು, ಲಿವರ್ ಹಾಗೂ ಬಿಡಿ ಟೈರನ್ನು ವಶಪಡಿಸಿಕೊಂಡು ಸ್ಥಳದಲ್ಲಿಯೇ ಮಹಜರು ತಯಾರಿಸಿರುವುದಾಗಿ ತಿಳಿಸಿರುತ್ತಾರೆ. ಮಹಜರಿನ ಮೂಲ ಪ್ರತಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದು ಅದರ ಪ್ರತಿಯನ್ನು ನೋಡಿ ಅದನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು. ವಾಹನವನ್ನು ಹಾಗೂ ಆರೋಪಿತರನ್ನು ವಶಕ್ಕೆ ತೆಗೆದುಕೊಂಡು ಕಛೇರಿಗೆ ಬಂದು ಈ ಕುರಿತು ಪ್ರಕರಣವನ್ನು ದಾಖಲು ಮಾಡಿದೆನು. ಪ್ರಥಮ ಮಾಹಿತಿ ವರದಿಯನ್ನು ಸಲ್ಲಿಸಿದೆನು. ಅದರ ಪ್ರತಿಯನ್ನು ನೋಡಿ ಅದನ್ನು ನಿಶಾನೆ ಪಿ-4 ಎಂದು ಗುರುತಿಸಲಾಯಿತು. ಈ ಕುರಿತು ಅಬಕಾರಿ ಕಾಯ್ದೆ ಕಲಂ 43(3) ಅಡಿಯಲ್ಲಿ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿದ್ದು ಅದನ್ನು ನಿಶಾನೆ ಪಿ-5 ಎಂದು ಗುರುತಿಸಲಾಯಿತು. ವಶಪಡಿಸಿಕೊಂಡ ಸ್ವತ್ತುಗಳನ್ನು ತಮ್ಮ ವಶದಲ್ಲಿಟ್ಟುಕೊಳ್ಳಲು ಅನುಮತಿ ಪಡೆದು ಪ್ರಕರಣವನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಗೆ ಹಸ್ತಾಂತರಿಸಿರುವುದಾಗಿ ಈ ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನದಲ್ಲಿ ನಿರ್ಮಿಸಲಾಗಿರುವ ಟ್ಯಾಂಕ್ ಕಳ್ಳಸಾಗಾಣಿಕೆ ಮಾಡುವ ಉದ್ದೇಶದಿಂದಲೇ ನಿರ್ಮಾಣ ಮಾಡಿರುವುದಾಗಿ ತಿಳಿಸಿ ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ತಕ್ಷೀರು ದಿನ ತನಗೆ ಯಾವುದೇ ಖಚಿತ ವರ್ತಮಾನ ಇರಲಿಲ್ಲ. ತಕ್ಷೀರು ಸ್ಥಳವು ಕೆ.ಪಿ.ಟಿ. ಕಾಲೇಜಿನ ಹತ್ತಿರವಿದ್ದು ತಾವು ನಂತೂರಿನ ಕಡೆಯಿಂದ ಕೂಳೂರು ಕಡೆಗೆ ಹೋಗುತ್ತಿದ್ದೆವು. ಲಾರಿಯನ್ನು ಪೆಟ್ರೋಲ್ ಪಂಪಿನ ಬಳಿ ನಿಲ್ಲಿಸಿರುತ್ತೇನೆ. ಲಾರಿಯಲ್ಲಿದ್ದ ಚಾಲಕ ಹಾಗೂ ಇನ್ನೊಬ್ಬ ವ್ಯಕ್ತಿಯು ಓಡಲು ಪ್ರಯತ್ನ ಪಡಲಿಲ್ಲ ಎಂದು ತಾನು ಸ್ಥಳದಲ್ಲಿ ಸರ್ಚ್ ಮೆಮೋ ತಯಾರಿಸಿರುವುದಾಗಿ ಪಂಚ ಸಾಕ್ಷಿದಾರರನ್ನು ತಾನೇ ಕರೆದಿರುವುದಾಗಿ ತಿಳಿಸಿರುತ್ತಾರೆ. ತಕ್ಷೀರು ಸ್ಥಳವು ಕೆ.ಪಿ.ಟಿ. ಕಾಲೇಜಿಗೆ 1 ಫರ್ಲಾಂಗು ಹಾಗೂ ಅತಿಥಿ ಗೃಹಕ್ಕೆ ಒಂದು ಫರ್ಲಾಂಗು ದೂರದಲ್ಲಿ ಹೋಟೆಲ್ ಇದ್ದು ಹೋಟೆಲ್ ಸಿಬ್ಬಂದಿಯನ್ನು ಸ್ವತಂತ್ರ ಸಾಕ್ಷಿಗಳು ದೊರೆತಿದ್ದರಿಂದ ಕರೆದಿರುವುದಿಲ್ಲ ಎಂದೂ ಆ ದಿನದಂದು ತಾನು ಯಾವುದೇ ಲಾರಿಯನ್ನು ವಶಪಡಿಸಿಕೊಂಡಿಲ್ಲ ಎಂದರೆ, ಸರಿಯಲ್ಲ. ತಕ್ಷೀರಿನಲ್ಲಿ ವಶಪಡಿಸಿಕೊಂಡಿರುವ ಮದ್ಯಸಾರಕ್ಕೂ ಹಾಗೂ ವಾಹನಕ್ಕೂ ಯಾವುದೇ ಸಂಬಂಧವಿಲ್ಲವೆಂದರೆ ಸರಿಯಲ್ಲವೆಂದು ತಕ್ಷೀರು ಸ್ಥಳದಲ್ಲಿ ಯಾವುದೇ ದಾಖಲೆ ತಯಾರಿಸಿಲ್ಲ ಎಂದರೆ ಸರಿಯಲ್ಲ ಎಂದು ತಿಳಿಸಿರುತ್ತಾರೆ. ಈ ಪಾಟೀ ಸವಾಲಿನಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನವಾಗಿರುವುದಿಲ್ಲ.

**ಪ್ರಾ.ಸಾ-1:**

ಈ ಪ್ರಕರಣದ ತನಿಖಾಧಿಕಾರಿಯಾದ ಶ್ರೀ ಅಜೀಜ್ ಪೆರ್ಮನ್ನೂರು ಇವರು ದಿನಾಂಕ: 4.12.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ಅಬಕಾರಿ ಉಪ ನಿರೀಕ್ಷಕರು, ಗುಪ್ತವಾರ್ತಾದಳ ಇವರಿಂದ ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆ ಪತ್ರ ಹಾಗೂ 750 ಮಿಲಿಯ 2 ಮಾದರಿ ಶೀಷೆಯನ್ನು ಪಡೆದು ದಿನಾಂಕ: 3.12.99 ರಂದು ರಾಸಾಯನಿಕ ವಿಶ್ಲೇಷಣೆಗೆ ಅಬಕಾರಿ ರಕ್ಷಕ ಶ್ರೀ ವಿಠಲಶೆಟ್ಟಿ, ಇವರ ಮುಖಾಂತರ ಕಳುಹಿಸಿರುತ್ತೇನೆ. ದಿನಾಂಕ: 17.12.99 ರಂದು ವಿಶ್ಲೇಷಿತ ಬಾಟಲಿಗಳನ್ನು ರಾಸಾಯನಿಕ ವರದಿಯನ್ನು ಪಡೆದು ಅದೇ ದಿನ ಅಧಿಕೃತ ಅಧಿಕಾರಿಗಳಿಗೆ ವರದಿ ಮಾಡಿರುತ್ತೇನೆ. ದಿನಾಂಕ: 11.3.2000 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆದು ವಾಹನ ಮಾಲೀಕರ ವಿವರ ಪಡೆದು ಈ ಪ್ರಕಾರ ವಾಹನ ಮಾಲೀಕರಿಗೆ ನೋಟೀಸು ನೀಡಿರುವುದಾಗಿ ತಿಳಿಸಿರುತ್ತಾರೆ. ಪ್ರಕರಣಕ್ಕೆ ಸಂಬಂಧಿಸಿದಂತೆ ಅಂತಿಮ ವರದಿಯನ್ನು ಸಲ್ಲಿಸಲು ಬಾಕಿಯಿರುತ್ತದೆ. ರಾಸಾಯನಿಕ ತಜ್ಞರು ನೀಡಿರುವ ವರದಿಯ ಜೆರಾಕ್ಸ್ ಪ್ರತಿಯನ್ನು ನೋಡಿದೆನು ಅದನ್ನು ನಿಶಾನೆ ಪಿ-1 ಎಂದು ಗುರುತಿಸಲಾಯಿತು. ಈ ಪ್ರಕರಣವನ್ನು ಪಡೆದ ನಂತರ ಅಧಿಕೃತ ಅಧಿಕಾರಿಗಳಿಗೆ ವರದಿಯನ್ನು ಸಲ್ಲಿಸಿರುತ್ತೇನೆ. ಅದನ್ನು ನೋಡಿದೆನು. ಅದನ್ನು ನಿಶಾನೆ ಪಿ-2 ಎಂದು ಗುರುತಿಸಲಾಯಿತು ಎಂದು ತಮ್ಮ ಸಾಕ್ಷ್ಯವನ್ನು ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಈ ಪ್ರಕರಣದಲ್ಲಿ ತನಿಖೆ ಮುಗಿದಿರುವುದಿಲ್ಲ. ಸಾರಿಗೆ ಅಧಿಕಾರಿಗಳು ಸಲ್ಲಿಸಿರುವ ವರದಿಯಂತೆ ವಾಹನದ ಮಾಲೀಕರು ಇದರಲ್ಲಿ ಭಾಗಿಯಾಗಿರುತ್ತಾರೆಂದು ಕಂಡು ಬರುತ್ತದೆ. ಆರೋಪಿತರು ತನ್ನ ಮುಂದೆ ಹಾಜರಾಗಿ ಯಾವುದೇ ಹೇಳಿಕೆಯನ್ನು ನೀಡಿರುವುದಿಲ್ಲ ಈ ತಕ್ಷೀರಿಗೂ ಹಾಗೂ ವಶಪಡಿಸಿಕೊಂಡಿರುವ ಲಾರಿಗೂ ಯಾವುದೇ ಸಂಬಂಧವಿಲ್ಲವಿಲ್ಲವೆಂದರೆ ಸರಿಯಲ್ಲವೆಂದು ಸಾಕ್ಷಿ ನೀಡಿರುತ್ತಾರೆ. ಈ ಪಾಟೀ ಸವಾಲಿನಲ್ಲಿ ಅರ್ಜಿದಾರರಿಗೆ ಯಾವುದೇ ಪ್ರಯೋಜನ ದೊರೆತಿರುವುದಿಲ್ಲ.

**ಪ್ರಾ.ಸಾ-2:**

ಶ್ರೀ ವಿಠಲ ಶೆಟ್ಟಿ, ಅಬಕಾರಿ ರಕ್ಷಕರು ದಿನಾಂಕ: 4.12.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ನೀಡಿರುತ್ತಾರೆ. ದಿನಾಂಕ: 31.12.99 ರಂದು ಈ ಪ್ರಾಧಿಕಾರಕ್ಕೆ ಸಂಬಂಧಿಸಿದ 2 ಮಾದರಿ ಶೀಷೆ ಮತ್ತು ದಾಖಲೆ ಪತ್ರಗಳನ್ನು ಪಡೆದುಕೊಂಡು ಅದೇ ದಿನ ರಾಸಾಯನಿಕ ತಜ್ಞರಿಗೆ ತಲುಪಿಸಿರುತ್ತೇನೆ. ದಿನಾಂಕ: 17.2.2000 ರಂದು ರಾಸಾಯನಿಕ ತಜ್ಞರು ವಿಶ್ಲೇಷಿಸಿದ ಬಾಟಲಿಗಳನ್ನು, ತಜ್ಞರ ವರದಿಯನ್ನು ಅಬಕಾರಿ ನಿರೀಕ್ಷಕರಿಗೆ ತಂದು ತಲುಪಿಸಿರುತ್ತೇನೆ ಎಂದು ತನ್ನ ಸಾಕ್ಷ್ಯ ನೀಡಿರುತ್ತಾರೆ.

ಈ ಪ್ರಕರಣದಲ್ಲಿ ಪ್ರಾ.ಸಾ-1 ರಿಂದ ಪ್ರಾ.ಸಾ-3 ರವರೆಗಿನ ಸಾಕ್ಷಿಗಳು ಪ್ರಕರಣಕ್ಕೆ ಪೂರಕವಾಗಿ ಸಾಕ್ಷಿ ನೀಡಿದ್ದು ಸದ್ರಿ ಸಾಕ್ಷಿಗಳ ಹಾಗೂ ಲಭ್ಯವಿರುವ ದಾಖಲೆಗಳ ಆಧಾರದ ಮೇಲೆ ದಿನಾಂಕ: 22.12.99 ರಂದು ವಾಹನ ಲಾರಿ ಸಂಖ್ಯೆ: ಕೆಎ:19-5804 ರಲ್ಲಿ ಅಕ್ರಮ ಮದ್ಯಸಾರ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಸದರಿ ಅಕ್ರಮ ಮದ್ಯಸಾರ ಸಾಗಾಣಿಕೆಯು ತಮ್ಮ ತಿಳುವಳಿಕೆಗೆ ಬಾರದೇ ನಡೆದಿದೆ ಎಂದು ಎಲ್ಲಾ ಸಾಕ್ಷ್ಯಾಧಾರಗಳೊಂದಿಗೆ ಸಾಬೀತು ಪಡಿಸುವ ಜವಾಬ್ದಾರಿ ವಾಹನ ಮಾಲೀಕರದ್ದಾಗಿರುತ್ತದೆ. ಆದರೆ ಈ ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆ ನೀಡಲು ಪ್ರಾಧಿಕಾರವು ನಾಲ್ಕು ಬಾರಿ ನೋಟೀಸು ನೀಡಿದ್ದು, ಸದರಿ ನೋಟೀಸುಗಳನ್ನು ಸ್ವೀಕರಿಸಿದ್ದು, ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಹಾಗೂ ಈ ಅಪರಾಧವು ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂದು ಸಾಬೀತು ಪಡಿಸಲು ವಿಫಲರಾಗಿರುತ್ತಾರೆ. ಅಲ್ಲದೆ ಅರ್ಜಿದಾರರ ಪರ ವಕೀಲರಿಗೆ ವಿಚಾರಣೆಗೆ ಪ್ರತಿರಕ್ಷಾ ಸಾಕ್ಷಿಯನ್ನು ಹಾಜರುಪಡಿಸಲು 3 ಬಾರಿ ಅವಕಾಶವನ್ನು ನೀಡಿದ್ದರೂ ವಾಹನ ಮಾಲೀಕರ ಪರ ವಕೀಲರು ಪ್ರತಿರಕ್ಷಾ ಸಾಕ್ಷಿಯನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಲು ವಿಫಲರಾಗಿರುತ್ತಾರೆ. ಈ ಕಾರಣದಿಂದ ಅಪರಾಧವು ವಾಹನ ಮಾಲೀಕರ ತಿಳುವಳಿಕೆಯಿಂದಲೇ ನಡೆದಿದೆ ಎಂದೂ ಹಾಗೂ ಲಾರಿಯಲ್ಲಿ ಅಕ್ರಮ ಮದ್ಯಸಾರ ಸಾಗಣೆ ಮಾಡಲು ಗುಪ್ತವಾಗಿ ಟ್ಯಾಂಕನ್ನು ಅಳವಡಿಸಿರುವುದನ್ನು ಗಮನಿಸಿದಾಗ ವಾಹನ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಅಕ್ರಮ ಮದ್ಯಸಾರವನ್ನು ಸಾಗಣೆ ಮಾಡುವ ಉದ್ದೇಶದಿಂದಲೇ ಗುಪ್ತವಾಗಿ ಟ್ಯಾಂಕನ್ನು ನಿರ್ಮಿಸಿ ಅಕ್ರಮ ಮದ್ಯಸಾರವನ್ನು ಸಾಗಣೆ ಮಾಡಲು ಅನುವು ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಎರಡನೇ ಅಂಶವನ್ನು ನಕರಾತ್ಮಕವಾಗಿ ಪರಿಗಣಿಸಿರುತ್ತೇನೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತು ಗೊಳಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು, ನಂ.5 ಅಬಕಾರಿ ಗುಪ್ತ ವಾರ್ತಾದಳ, ಮಂಗಳೂರು ವಿಭಾಗ, ಮಂಗಳೂರು ಇವರ ಮೊಕದ್ದಮೆ ಸಂಖ್ಯೆ: 10/99-2000 ದಿನಾಂಕ: 22.12.99 ರಲ್ಲಿ ವಶಪಡಿಸಿಕೊಂಡಿರುವ ವಾಹನ ಲಾರಿ ಸಂಖ್ಯೆ: ಕೆಎ-19-5804ನ್ನು ನಿಯಮ 43ಎ (2) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 07.10.2004 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಎನ್.ಎಂ. ಹುಸೇನ್**

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.ನಂ.1:- ಶ್ರೀ ಅಜೀಜ್ ಪೆರ್ಮನ್ನೂರು, ಕುಲಶೇಖರ ವಲಯ, ಕುಲಶೇಖರ.
ಪ್ರಾ.ಸಾ.ನಂ.2:- ಶ್ರೀ ವಿಠಲ ಶೆಟ್ಟಿ, ಅಬಕಾರಿ ರಕ್ಷಕರು.
ಪ್ರಾ.ಸಾ.ನಂ.3- ಶ್ರೀ ಶಂಕರ ಮುಖಾರಿ, ಅಬಕಾರಿ ಉಪ ನಿರೀಕ್ಷಕರು

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | | |
|---|---|---|
| ನಿಶಾನೆ ಪಿ1 | : | ರಾಸಾಯನಿಕ ವರದಿ |
| ನಿಶಾನೆ ಪಿ2 | : | ಅಬಕಾರಿ ನಿರೀಕ್ಷಕರು, ಕುಲಶೇಖರವರ ವರದಿ |
| ನಿಶಾನೆ ಪಿ2ಎ | : | ವರದಿಯ ಸಹಿ |
| ನಿಶಾನೆ ಪಿ3 | : | ಮಹಜರು |
| ನಿಶಾನೆ ಪಿ4 | : | ಪ್ರಥಮ ಮಾಹಿತಿ ವರದಿ |
| ನಿಶಾನೆ ಪಿ5 | : | 43(ಎ) ಅಡಿಯಲ್ಲಿರುವ ವರದಿ |

**ಅನುಬಂಧ-3**

ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು - ಇಲ್ಲಾ -

**ಅನುಬಂಧ-4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು - ಇಲ್ಲಾ -

**ಎನ್.ಎಂ. ಹುಸೇನ್**

ಪಿ.ಆರ್. 1500 ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/400/ಡಿಟಿಸಿಆರ್/1998-1999, ದಿನಾಂಕ: 14ನೇ ಅಕ್ಟೋಬರ್ 2004**

**ಉಪಸ್ಥಿತರು:** ಗೋವಿಂದಪ್ಪ ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದಿದಾರರು:** ಅಬಕಾರಿ ನಿರೀಕ್ಷಕರು, ನಂ.3, ಇ.ಐ.ಬಿ., ಮಂಗಳೂರು ವಿಭಾಗ, ಮಂಗಳೂರು.

**ವಿರುದ್ಧ**

**ಆರೋಪಿಗಳು:** 1) ಯೂಸುಫ್ (ಪ್ರಾಯ 28 ವರ್ಷ) ಬಿನ್ ಅಬೂಬಕ್ಕರ್, ಮುಟ್ಟನೂರು ಗ್ರಾಮ ಕಣ್ಣನೂರು. (ವಾಹನ ಚಾಲಕ)
2) ರಮೇಶ್ (ಪ್ರಾಯ 23 ವರ್ಷ) ಬಿನ್ ರಾಜಣ್ಣ, ಚಂದ್ರ ಲೇಔಟ್, ಉತ್ತರ ಬೆಂಗಳೂರು ತಾಲ್ಲೂಕು. (ಕ್ಲೀನರ್).

**ಅರ್ಜಿದಾರರು:** ಶ್ರೀ ಡಿ. ಚಂದ್ರಶೇಖರ್ ಬಿನ್ ದೊರೈಸ್ವಾಮಿ, ವಾಸ: 212, 3ನೇ ಮೈನ್, 4ನೇ ಕ್ರಾಸ್, ಚಾಮರಾಜಪೇಟೆ, ಬೆಂಗಳೂರು-18 ಇವರ ಜಿ.ಪಿ.ಎ. ಹೋಲ್ಡರ್.
ಶ್ರೀ ಟಿ.ಹೆಚ್. ಸೋಮಶೇಖರ್ ಬಿನ್ ದಿ.ಟಿ. ಹನುಮಂತಪ್ಪ, ಮಂ.ಸಂ:5:21, 3ನೇ ಮೈನ್, ಕೆ.ಎಚ್.ಎಂ. ಬ್ಲಾಕ್, ಗಂಗಾ ನಗರ ಬೆಂಗಳೂರು-32.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 29.9.1998 ರಂದು ಪೂರ್ವಾಹ್ನ 11.30 ಗಂಟೆಯ ಸಮಯ ಮಂಗಳೂರು ಮಹಾನಗರಪಾಲಿಕೆ ಹೆದ್ದಾರಿ ಸಂಖ್ಯೆ: 17 ರಲ್ಲಿ ನಂತೂರು ಬಳಿಯ ಅಲ್ವಾರೀಸ್ ಸೆಂಟರ್ ಹತ್ತಿರ ಅಬಕಾರಿ ನಿರೀಕ್ಷಕರು, ಗುಪ್ತವಾರ್ತಾದಳ, ಮಂಗಳೂರು ಇವರು ತಮ್ಮ ಸಿಬ್ಬಂದಿಯೊಂದಿಗೆ ರಸ್ತೆಗಾವಲು ನಡೆಸುತ್ತಿದ್ದ ಸಮಯ ಕೂಳೂರು ಕಡೆಯಿಂದ ನಂತೂರು ಕಡೆಗೆ ಲಾರಿಯು ಬರುತ್ತಿದ್ದು, ಸಂಶಯದ ಮೇರೆಗೆ ಲಾರಿಯನ್ನು ತಡೆದು ನಿಲ್ಲಿಸಿ ಶೋಧನೆ ಮಾಡಲು ತೀರ್ಮಾನಿಸಿ, ಶೋಧನೆಗೆ ನ್ಯಾಯಾಲಯದ ವಾರಂಟ್ ಪಡೆಯಲು ಕಾಲಾವಕಾಶವಿಲ್ಲದ ಕಾರಣ ಸರ್ಚ್ ಮೆಮೋ ತಯಾರಿಸಿ ತಪಾಸಣೆ ಮಾಡಲಾಗಿ, ಸದ್ರಿ ಲಾರಿಯ ಸರಕು ತುಂಬುವ ಸ್ಥಳದಲ್ಲಿ ವಿಶೇಷವಾಗಿ ನಿರ್ಮಿಸಿದ ಕಂಪಾರ್ಟ್‌ಮೆಂಟನ್ನು ಪತ್ತೆ ಹಚ್ಚಿದ್ದು, ಅದರ ಅಳತೆ 4 1/2 ಅಡಿ ಉದ್ದ, 7 ಅಡಿ ಅಗಲ ಹಾಗೂ 7 ಅಡಿ ಎತ್ತರವಿದ್ದು, ಅದಕ್ಕೆ 2 1/4 X 6 1/2 ವಿಸ್ತೀರ್ಣದ ಬಾಗಿಲು ಅಳವಡಿಸಿದ್ದು ಸದ್ರಿ ದ್ವಾರವನ್ನು ಕಬ್ಬಿಣದ ಶೀಟ್‌ನಿಂದ ಮುಚ್ಚಲ್ಪಟ್ಟಿದ್ದು ಅದನ್ನು ತೆಗೆಯಲಾಗಿ ಅದರಲ್ಲಿ ಮದ್ಯ ತುಂಬಿದ ಪೆಟ್ಟಿಗೆಗಳು ಪತ್ತೆಯಾಗಿರುತ್ತದೆ. ಸದ್ರಿ ಮದ್ಯವನ್ನು ಹೊಂದಲು ಯಾವುದೇ ರಹದಾರಿ ಪತ್ರವನ್ನು ಹಾಜರುಪಡಿಸಿರುವುದಿಲ್ಲ. ಪತ್ತೆಯಾದ ಮದ್ಯವನ್ನು ಪರಿಶೀಲನೆ ಮಾಡಲಾಗಿ ಮೆ: ನ್ಯಾಷನಲ್ ಡಿಸ್ಟಿಲರಿಯಲ್ಲಿ ತಯಾರಿಸಲಾದ ಒರಿಜಿನಲ್ ಚಾಯ್ಸ್ ವಿಸ್ಕಿ 180 ಮಿಲಿಯ 48 ಶೀಷೆಗಳ 129 ಪೆಟ್ಟಿಗೆ, 375 ಮಿಲಿಯ 24 ಬಾಟ್ಲಿಗಳ 48 ಪೆಟ್ಟಿಗೆ ಹಾಗೂ 750 ಮಿಲಿಯ 12 ಬಾಟ್ಲಿಗಳ 75 ಪೆಟ್ಟಿಗೆಗಳು ಇದ್ದು ಒಟ್ಟು 2221.560 ಲೀಟರ್ ಮದ್ಯವು ಪತ್ತೆಯಾಗಿರುತ್ತದೆ. ನಂತರ ಗಾತ್ರವಾರು 180 ಮಿಲಿ ಶೀಷೆಗಳಿಂದ 13 ಶೀಷೆ, 375 ಮಿಲಿ ಶೀಷೆಗಳಿಂದ 4 ಶೀಷೆ ಹಾಗೂ 750 ಮಿಲಿ ಶೀಷೆಗಳಿಂದ 5 ಶೀಷೆಗಳಂತೆ ಒಟ್ಟು 22 ಬಾಟ್ಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿಯನ್ನಾಗಿ ತೆಗೆದು ಇಲಾಖೆಯ ಸೀಲ್‌ನಿಂದ ಸೀಲ್ ಮಾಡಿ ಮಾದರಿ ಶೀಷೆಗಳಿಗೆ ಅಪರಾಧಿಗಳ ವಿಳಾಸವಿರುವ ಗುರುತಿನ ಚೀಟಿಯನ್ನು ಅಂಟಿಸಿರುತ್ತಾರೆ. ಆರೋಪಿಗಳ ವಿಳಾಸವನ್ನು ಕೇಳಲಾಗಿ ಲಾರಿಯ ಚಾಲಕ ತನ್ನ ಹೆಸರು ಯೂಸುಫ್ ಬಿನ್ ಅಬೂಬಕ್ಕರ್ (ಪ್ರಾಯ 28 ವರ್ಷ), ಮುಟ್ಟನೂರು ಗ್ರಾಮ, ಚಾವಸೇರಿ ಅಂಚೆ, ಕಣ್ಣೂರು ಜಿಲ್ಲೆ ಎಂದು, ಲಾರಿಯಲ್ಲಿದ್ದ ಕ್ಲೀನರ್ ತನ್ನ ಹೆಸರು ರಮೇಶ್, ಬಿನ್ ರಾಜಣ್ಣ (ಪ್ರಾಯ 23 ವರ್ಷ), ಚಂದ್ರ ಲೇಔಟ್, ಬೆಂಗಳೂರು ಉತ್ತರ ತಾಲ್ಲೂಕು ಎಂದು ತಿಳಿಸಿರುತ್ತಾರೆ. ಲಾರಿಯನ್ನು ಪರಿಶೀಲನೆ ಮಾಡಲಾಗಿ ಲಾರಿ ಸಂಖ್ಯೆ: ಕೆಎ-35-2222 ಆಗಿದ್ದು ಮಿಟ್ಸುಬೀಷಿ ಕಂಪೆನಿಯದ್ದಾಗಿರುತ್ತದೆ. ನಂತರ ಸ್ಥಳ ಮಹಜರು ಮೂಲಕ ಮದ್ಯ ಮತ್ತು ವಾಹನ ಲಾರಿ ಸಂಖ್ಯೆ: ಕೆಎ-35-2222ನ್ನು ಇಲಾಖೆಗೆ ವಶಪಡಿಸಿಕೊಂಡು ಅಪರಾಧಿಗಳನ್ನು ದಸ್ತಗಿರಿ ಮಾಡಿರುತ್ತಾರೆ. ನಂತರ ಇದು ಅಬಕಾರಿ ಕಾಯ್ದೆ ಕಲಂ 11, 14 ಮತ್ತು 38ಎ ಪ್ರಕಾರ ಅಪರಾಧವಾಗಿದ್ದು, ಕಲಂ 34 ರೀತ್ಯಾ ಶಿಕ್ಷಾರ್ಹವಾಗಿದ್ದು ಅಪರಾಧಿಗಳ ವಿರುದ್ಧ ಗುನ್ನೆ ಸಂಖ್ಯೆ: 2/98-99 ದಿನಾಂಕ: 29.9.1998ರ ಮೂಲಕ ಮೊಕದ್ದಮೆ ದಾಖಲು ಮಾಡಿ ಪ್ರಥಮ ಮಾಹಿತಿ ವರದಿ, ಮಹಜರುಗಳನ್ನು ಮಾನ್ಯ ನ್ಯಾಯಾಲಯಕ್ಕೂ ಅವುಗಳ ಪ್ರತಿಗಳನ್ನು ನಿಬಂಧನೆ 43ರ ಪ್ರಕಾರ ಸ್ವತ್ತುಗಳ ಪಟ್ಟಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಪ್ರಾಧಿಕಾರದ ಆದೇಶದ ಮೇರೆಗೆ ಪ್ರಕರಣವನ್ನು ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ದಿನಾಂಕ: 31.10.1998 ರಂದು ಈ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನದ ಮಾಲೀಕ ಶ್ರೀ ಡಿ. ಚಂದ್ರಶೇಖರ ಇವರ ಜಿ.ಪಿ.ಎ. ಹೋಲ್ಡರ್ ಶ್ರೀ ಟಿ.ಹೆಚ್. ಸೋಮಶೇಖರ್ ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ ವಾಹನದ ಮಧ್ಯಂತರ ಬಿಡುಗಡೆಗಾಗಿ ಕೋರಿದ್ದು, ಈ ಪ್ರಾಧಿಕಾರವು ಅರ್ಜಿದಾರರ ಮಧ್ಯಂತರ ಬಿಡುಗಡೆ ಅರ್ಜಿಯನ್ನು ತಿರಸ್ಕರಿಸಿ ದಿನಾಂಕ: 23.12.1998 ರಂದು ಆದೇಶ ನೀಡಿರುತ್ತದೆ. ಸದ್ರಿ ಆದೇಶದ ವಿರುದ್ಧ ಅರ್ಜಿದಾರರು ಮಾನ್ಯ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದ್ದು, ಮಾನ್ಯ ಸತ್ರ ನ್ಯಾಯಾಲಯವು ಜಪ್ತುಪಡಿಸಿದ ವಾಹನವನ್ನು ಒಂದು ಲಕ್ಷ ರೂಪಾಯಿಗಳ ಇಂಡೆಮ್ನಿಟಿ ಬಾಂಡ್ ಮತ್ತು ಒಂದು ಜಾಮೀನು ಹಾಗೂ ಇನ್ನಿತರ ಷರತ್ತುಗಳೊಂದಿಗೆ ಮಧ್ಯಂತರ ಬಿಡುಗಡೆಗೆ ದಿನಾಂಕ: 12.2.1999 ರಂದು ಆದೇಶ ನೀಡಿರುತ್ತದೆ. ಮಾನ್ಯ ಸತ್ರ ನ್ಯಾಯಾಲಯದ ಆದೇಶದನ್ವಯ ದಿನಾಂಕ: 15.3.1999 ರಂದು ಈ ಪ್ರಾಧಿಕಾರವು ವಾಹನವನ್ನು ಮಧ್ಯಂತರ ಬಿಡುಗಡೆಗೆ ಆದೇಶ ನೀಡಿರುತ್ತದೆ.

ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿದ್ದ ಮದ್ಯದ ಮಾದರಿ ರಾಸಾಯನಿಕ ತಜ್ಞರ ವರದಿಯಂತೆ ಮದ್ಯವಾಗಿದ್ದು, ಇದು ಮಾನವ ಸೇವನೆಗೆ ಯೋಗ್ಯವಾಗಿರುವುದರಿಂದ ಜಪ್ತುಪಡಿಸಲಾಗಿರುವ ಮದ್ಯವನ್ನು ಪ್ರಾಧಿಕಾರವು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯವನ್ನು ವಿಲೇವಾರಿ ಮಾಡಲು ದಿನಾಂಕ: 27.2.1999 ರಂದು ಆದೇಶ ನೀಡಿರುತ್ತದೆ. ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನ ಮಾಲೀಕರಿಗೆ ಪ್ರಾಧಿಕಾರವು ದಿನಾಂಕ: 27.3.2000 ರಂದು ಕಾರಣ ಕೇಳಿ ನೊಟೀಸನ್ನು ನೀಡಲಾಗಿದ್ದು, ಸದ್ರಿ ನೋಟೀಸಿಗೆ ವಾಹನ ಮಾಲೀಕರು ಯಾವುದೇ ಉತ್ತರವನ್ನು ನೀಡಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರಕಾರದ ಪರ ನಾಲ್ಕು ಸಾಕ್ಷಿಗಳನ್ನು ವಿಚಾರಣೆಗೊಳಪಡಿಸಿ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಪ್ರತಿರಕ್ಷಾ ಸಾಕ್ಷಿಗಳು ಹಾಜರಾಗದೇ ಇದ್ದುದರಿಂದ ಪ್ರತಿರಕ್ಷಾ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನಾ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ: 29.9.1998 ರಂದು ವಾಹನ ಲಾರಿ ಸಂಖ್ಯೆ: ಕೆಎ-35-2222 ರಲ್ಲಿ ಅಕ್ರಮವಾಗಿ ಮದ್ಯ ಸಾಗಣೆ ಮಾಡಲಾಗಿತ್ತೇ?

2) ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು ತನಗೆ ತಿಳಿಯದೆ ಅಕ್ರಮ ಮದ್ಯ ಸಾಗಣೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತುಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ-1:**

ಶ್ರೀ ಗೋಪಾಲ ಬಿನ್ ಮುತ್ತಪ್ಪ ಪೂಜಾರಿ ಇವರು ದಿನಾಂಕ: 20.11.2000 ರಂದು ಪ್ರಕರಣದ ಸ್ವತಂತ್ರ ಸಾಕ್ಷಿಯಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯ ನೀಡಿರುತ್ತಾರೆ. ತಾನು 10-15 ವರ್ಷ ಚಾಲಕನಾಗಿ ಕೆಲಸ ಮಾಡಿರುತ್ತೇನೆ. ದಿನಾಂಕ: 29.9.1998 ರಂದು ನಂತೂರು ಕ್ರಾಸ್ ಬಳಿ ಐಡಿಯಲ್ ಗ್ಯಾರೇಜ್‌ನಲ್ಲಿ ರಿಪೇರಿಗೆ ಕಾರನ್ನು ನಿಲ್ಲಿಸಿ ನಿಂತಿದ್ದು, ಅಲ್ಲಿ ಅಬಕಾರಿ ಇಲಾಖೆಯವರು ಲಾರಿಯನ್ನು ಹಿಡಿದು ಶೋಧನೆ ಮಾಡಲಾಗಿ ಲಾರಿಯ ಹಿಂಭಾಗದಲ್ಲಿ ಎಕ್ಸ್‌ಟ್ರಾ ಕಂಪಾರ್ಟ್‌ಮೆಂಟ್ ಇದ್ದು ಅದನ್ನು ತೆಗೆದು ನೋಡಲಾಗಿ ಅದರಲ್ಲಿ ರಟ್ಟಿನ ಪೆಟ್ಟಿಗೆಗಳಲ್ಲಿ ಮದ್ಯದ ಬಾಟ್ಲಿಗಳು ಇರುವುದು ಕಂಡು ಬಂತು. ಲೆಕ್ಕ ಮಾಡಲಾಗಿ 252 ಪೆಟ್ಟಿಗೆಗಳಿದ್ದವು. ವಾಹನದ ಸಂಖ್ಯೆ: ಕೆಎ-35-2222 ಆಗಿರುತ್ತೆ, ಮಹಜರನ್ನು ಬರೆದರು. ಮಹಜರಿನಲ್ಲಿ ಇರುವ ತನ್ನ ಸಹಿಯನ್ನು ಗುರುತಿಸಿರುತ್ತಾರೆ. ಅದನ್ನು ನಿಶಾನೆ ಪಿ-1ಎ ಎಂದೂ, ನಿಶಾನೆ ಪಿ-1 ರಲ್ಲಿ ಬರೆದ ವಿಷಯ ಸರಿಯಿರುತ್ತೆ ಎಂದು ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ನಾನು ಮಹಜರಿಗೆ ಸಹಿ ಹಾಕಿರುವುದು ಕಛೇರಿಯಲ್ಲಿ ಅಂದರೆ ಸರಿಯಲ್ಲ. ಖಾಲಿ ಕಾಗದದ ಮೇಲೆ ಸಹಿ ಮಾಡಿರುತ್ತೇನೆ ಎಂದರೆ ಸರಿಯಲ್ಲ. ಗ್ಯಾರೇಜ್‌ನಿಂದ ಒಂದು ಫರ್ಲಾಂಗ್ ಉಡುಪಿ ಕಡೆ ತನ್ನ ವಾಹನದ ಜಾಯಿಂಟ್ ಕಟ್ಟಾಗಿತ್ತು. ಆದಿನ ಉಡುಪಿ ದೇವಸ್ಥಾನಕ್ಕೆ ಹೋಗಿ ಹಿಂತಿರುಗಿ ಬರುತ್ತಿದ್ದೆ. ಉಡುಪಿಯಿಂದ ಹೊರಟಾಗ 10.15 ಗಂಟೆ ಆಗಿರುತ್ತೆ. ಘಟನೆ ನಡೆದ ಸ್ಥಳಕ್ಕೆ ಬಂದಾಗ 11.00 ಗಂಟೆ ಆಗಿರಬಹುದು. 11.45ಕ್ಕೆ ಕಾರಿನ ಹತ್ತಿರಕ್ಕೆ ಬಂದಿರುತ್ತೇನೆ. ಬಿಡಿಭಾಗವನ್ನು ಖರೀದಿಸಿ ಗ್ಯಾರೇಜಿಗೆ 12.00 ಗಂಟೆಗೆ ಬಂದಿರುತ್ತೇನೆ. ರಿಪೇರಿ ಅರ್ಧ ಗಂಟೆಯಿಂದ ಮುಕ್ಕಾಲು ಗಂಟೆ ಆಗಿರುತ್ತೆ. ತಾನು ಮಹಜರಿಗೆ ಸುಮಾರು 1.45ಕ್ಕೆ ಸಹಿ ಮಾಡಿರುತ್ತೇನೆ. ನಾನು ವಾಹನ ಚಾಲಕನಲ್ಲ ಬಾರ್ ಎಂಡ್ ರೆಸ್ಟೋರೆಂಟಿನಲ್ಲಿ ಕೆಲಸ ಮಾಡುತ್ತೇನೆಂದರೆ ಹಾಗೂ ಅಬಕಾರಿ ಅಧಿಕಾರಿಗಳ ಮರ್ಜಿಗೆ ಸಹಿ ಹಾಕಿರುತ್ತೇನೆಂದರೆ ಸರಿಯಲ್ಲ. ಅಬಕಾರಿ ಇಲಾಖೆಯ ಖಾಯಂ ಸಾಕ್ಷಿದಾರನಾಗಿ ಸಹಿ ಹಾಕಿದ್ದೇನೆಂದರೆ ಸರಿಯಲ್ಲ. ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂದು ತಮ್ಮ ಸಾಕ್ಷ್ಯ ನೀಡಿರುತ್ತಾರೆ. ಈ ಸಾಕ್ಷಿಯಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನವಾಗಿರುವುದಿಲ್ಲ.

**ಪ್ರಾ.ಸಾ-2:**

ಶ್ರೀ ಜಿ.ಕೆ. ಸುಬ್ರಹ್ಮಣ್ಯ, ಅಬಕಾರಿ ನಿರೀಕ್ಷಕರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು, ದಿನಾಂಕ: 30.11.2000 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ದಿನಾಂಕ: 29.9.1998 ರಂದು 11.00 ಗಂಟೆಗೆ ಅಬಕಾರಿ ಉಪ ಅಧೀಕ್ಷಕರು ಹಾಗೂ ಸಿಬ್ಬಂದಿಯೊಂದಿಗೆ ನಂತೂರು ಕ್ರಾಸ್ ಬಳಿ ಅಲ್ವಾರೀಸ್ ಕಟ್ಟಡದ ಮುಂಭಾಗ ರಸ್ತೆಗಾವಲು ನಡೆಸುತ್ತಿದ್ದೆವು. ಸುಮಾರು 11.30 ಗಂಟೆ ಸಮಯಕ್ಕೆ ಕೂಳೂರು ಕಡೆಯಿಂದ ನಂತೂರು ಕಡೆಗೆ ವಾಹನ ಮಿನಿ ಲಾರಿ ಸಂಖ್ಯೆ: ಕೆಎ-35-2222 ಬರುತ್ತಿದ್ದು ಅದನ್ನು ನಿಲ್ಲಿಸಲು, ಚಾಲಕನೊಂದಿಗೆ ಇನ್ನೊಬ್ಬ ಆಸಾಮಿಯು ಕುಳಿತಿದ್ದು ವಾಹನದಲ್ಲಿನ ಸರಕಿನ ಬಗ್ಗೆ ವಿಚಾರಿಸಲಾಗಿ ಸರಕು ಯಾವುದೂ ಇಲ್ಲವೆಂದು ತಿಳಿಸಿದರು. ಅವರ ವರ್ತನೆಯ ಬಗ್ಗೆ ಸಂಶಯಗೊಂಡು ಲಾರಿಯ ಶೋಧನೆಗೆ ನ್ಯಾಯಾಲಯದಿಂದ ವಾರಂಟ್ ಪಡೆಯಲು ಕಾಲಾವಕಾಶವಿಲ್ಲದ ಕಾರಣ ಸರ್ಚ್ ಮೆಮೋ ತಯಾರಿಸಿ ಲಾರಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಲಾಗಿ, ಸರಕು ಇರುವ ಸ್ಥಳದಲ್ಲಿ ಗೋಪ್ಯವಾಗಿ ಒಂದು ಕಂಪಾರ್ಟ್‌ಮೆಂಟನ್ನು ರಚಿಸಿದ್ದು, ಅದಕ್ಕೆ ಕಬ್ಬಿಣದ ಶೀಟ್‌ನಿಂದ ಒಂದು ದ್ವಾರ ನಿರ್ಮಿಸಿ ಸ್ಕ್ರೂ ಫಿಟ್ ಮಾಡಲಾಗಿತ್ತು. ಸ್ಕ್ರೂವನ್ನು ತೆಗೆದು ಬಾಗಿಲನ್ನು ತೆಗೆದು ನೋಡಲಾಗಿ, ಸದ್ರಿ ಕಂಪಾರ್ಟ್‌ಮೆಂಟಿನಲ್ಲಿ ಮದ್ಯದ ಪೆಟ್ಟಿಗೆಗಳು ಕಂಡು ಬಂದಿದ್ದು ಬಾಟ್ಲಿಗಳ ಮೇಲೆ ಒರಿಜಿನಲ್ ಚಾಯ್ಸ್ ಎಂದು ಬರೆದಿತ್ತು. ಅದರಲ್ಲಿ 180 ಮಿಲಿಯ 129 ಪೆಟ್ಟಿಗೆ, 375 ಮಿಲಿಯ 48 ಪೆಟ್ಟಿಗೆ, 750 ಮಿಲಿಯ 75 ಪೆಟ್ಟಿಗೆ ಒಟ್ಟು 252 ರಟ್ಟಿನ ಪೆಟ್ಟಿಗೆಗಳಿದ್ದು, ಸದ್ರಿ ಮದ್ಯವನ್ನು ಹೊಂದಿದ್ದಕ್ಕೆ ಚಾಲಕನನ್ನು ವಿಚಾರ ಮಾಡಲು ಆತನಲ್ಲಿ ಯಾವುದೇ ರಹದಾರಿ ಪತ್ರ ಇರಲಿಲ್ಲ. ಈ ರೀತಿ ಸಾಗಣೆ ಮಾಡುವುದು ಅಬಕಾರಿ ಕಾಯ್ದೆಗೆ ವಿರೋಧವೆಂದು ತಿಳಿಸಿ, ರಾಸಾಯನಿಕ ಪರೀಕ್ಷೆಗಾಗಿ 180 ಮಿಲಿ ಮದ್ಯದಿಂದ 13 ಸೀಸೆಗಳನ್ನು, 375 ಮಿಲಿ ಮದ್ಯದಿಂದ 4 ಸೀಸೆಗಳನ್ನು, 750 ಮಿಲಿ ಮದ್ಯದಿಂದ 5 ಸೀಸೆಗಳನ್ನು ತೆಗೆದು ಅವುಗಳಿಗೆ ಇಲಾಖಾ ಸೀಲ್‌ನಿಂದ ಮೊಹರು ಮಾಡಲಾಯಿತು. ನಂತರ ಆರೋಪಿಗಳ ವಿಳಾಸ ಕೇಳಲಾಗಿ ಚಾಲಕನು ತನ್ನ ಹೆಸರು ಯೂಸುಫ್ ಬಿನ್ ಅಬೂಬಕ್ಕರ್ (ಪ್ರಾಯ 28 ವರ್ಷ), ಮುಟ್ಟನೂರು ಗ್ರಾಮ, ಕಣ್ಣೂರು ಜಿಲ್ಲೆ ಎಂದು, ಚಾಲಕನೊಂದಿಗೆ ಇದ್ದವನು ತಾನು ರಮೇಶ್ ಬಿನ್ ರಾಜಣ್ಣ (ಪ್ರಾಯ 23 ವರ್ಷ), ಚಂದ್ರ ಲೇಔಟ್, ಬೆಂಗಳೂರು ಉತ್ತರ ತಾಲ್ಲೂಕು ಎಂದು ತಿಳಿಸಿದ್ದು, ಆರೋಪಿಗಳ ವಿಳಾಸವಿರುವ ಗುರುತಿನ ಚೀಟಿಗಳನ್ನು ಮಾದರಿ ಶೀಷೆಗಳಿಗೆ ಅಂಟಿಸಲಾಯಿತು. ಲಾರಿಯನ್ನು ಪರಿಶೀಲನೆ ಮಾಡಲು ಅದರ ನೋಂದಣಿ ಸಂಖ್ಯೆ: ಕೆಎ-35-2222 ಇದ್ದು ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿದ್ದು ಮಹಜರನ್ನು ನಿಶಾನೆ ಪಿ-1 ಎಂದು, ತನ್ನ ಸಹಿಯನ್ನು ನಿಶಾನೆ ಪಿ-1ಬಿ ಎಂದು ಗುರುತಿಸಲಾಯಿತು. ನಿಶಾನೆ ಪಿ-1ಕ್ಕೆ ಸಾಕ್ಷಿದಾರರ ರುಜುವನ್ನು ಪಡೆದಿರುತ್ತೇನೆ ಎಂದು ತಿಳಿಸಿರುತ್ತಾರೆ. ನಂತರ ದೊರೆತ ಲಾರಿ ಮತ್ತು ಸ್ವತ್ತುಗಳನ್ನು ಇಲಾಖೆ ವಶಕ್ಕೆ ತೆಗೆದುಕೊಂಡು ಆರೋಪಿಗಳನ್ನು ದಸ್ತಗಿರಿ ಮಾಡಿ ಪ್ರಕರಣವನ್ನು ದಾಖಲುಮಾಡಿ ಪ್ರಕರಣದ ದಾಖಲಾತಿಗಳನ್ನು ಪ್ರಾಧಿಕಾರಕ್ಕೆ ಸಲ್ಲಿಸಿ ಸ್ವತ್ತುಗಳನ್ನು ತನ್ನ ಸ್ವಾಧೀನದಲ್ಲಿಟ್ಟುಕೊಳ್ಳಲು ಅನುಮತಿಯನ್ನು ಪಡೆದಿರುತ್ತೇನೆಂದು ಸಾಕ್ಷ್ಯ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಸರ್ಚ್ ಮೆಮೋವನ್ನು ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ನಂತೂರು 5 ಮಾರ್ಗಗಳು ಕೂಡಿರುವ ಜಂಕ್ಷನ್ ಆಗಿರುತ್ತೆ. ಜಂಕ್ಷನ್‌ನಿಂದ 2 ಫರ್ಲಾಂಗ್ ದೂರದಲ್ಲಿ ಕಾಯುತ್ತಿದ್ದೆವು. ನಿಶಾನೆ ಪಿ-1 ರಲ್ಲಿ ಸ್ಥಳದಲ್ಲಿನ ಚೆಕ್ ಬಂದಿಯನ್ನು ಬರೆದಿರುವುದಿಲ್ಲ. ನಾವುಗಳು ಇಲಾಖೆಯ ಜೀಪ್‌ನಲ್ಲಿ ಹೋಗಿದ್ದೆವು. ಸದ್ರಿ ಸ್ಥಳಕ್ಕೆ ಹೋಗುವುದಕ್ಕೆ ಖಚಿತವಾದ ವರ್ತಮಾನ ಇರಲಿಲ್ಲ. ಈ ವಾಹನವನ್ನು ಶೋಧನೆ ಮಾಡುವ ಮುನ್ನ 2-3 ವಾಹನಗಳನ್ನು ನಿಲ್ಲಿಸಿದ್ದೆವು ಮತ್ತು ಅವುಗಳ ತಪಾಸಣೆ ಮಾಡಿರುತ್ತದೆ. ಈ ವಾಹನವನ್ನು ನಿಲ್ಲಿಸಲು ನಾನೇ ಸೂಚನೆ ಕೊಟ್ಟೆನು. ಸ್ಥಳದಿಂದ 20 ಗಜ ದೂರದಲ್ಲಿ ನಿಂತಿತ್ತು. ನಮ್ಮ ಚಾಲಕ ವಿಠಲ ಶೆಟ್ಟಿಗಾರ ಕಂಪಾರ್ಟ್‌ಮೆಂಟನ್ನು ಬಿಚ್ಚಿದನು. ಅದನ್ನು ಬಿಚ್ಚಲು 10 ನಿಮಿಷ ಬೇಕಾಯಿತು. ಸ್ವಾಧೀನಪಡಿಸಿಕೊಂಡ ಪೆಟ್ಟಿಗೆಗಳಿಗೆ ಅನುಕ್ರಮ ಸಂಖ್ಯೆ ಹಾಕಿರುವ ಬಗ್ಗೆ ಮಹಜರಿನಲ್ಲಿ ನಮೂದಿಸಿಲ್ಲ. ದೊರೆತ ಮದ್ಯದಲ್ಲಿ ಮಾದರಿಯನ್ನು ಗಾತ್ರವಾರು ತೆಗೆದ ಕ್ರಮವನ್ನು ನಿಶಾನೆ ಪಿ-1 ರಲ್ಲಿ ನಮೂದಿಸಿಲ್ಲ. ಈ ಎಲ್ಲಾ ಮಾದರಿ ಶೀಷೆಗಳಲ್ಲಿ ಒಟ್ಟು 7,000 ಲೀಟರ್ ಇರುತ್ತದೆ. ಮಾದರಿ ಸೀಲ್‌ನ ಸ್ಪೆಸಿಮನ್ ಸಿಗ್ನೇಚರನ್ನು ಈ ಕಛೇರಿಗೆ ಹಾಜರುಪಡಿಸಿಲ್ಲ. ಅಲ್ವಾರೀಸ್ ಜಂಕ್ಷನ್ ಜನನಿಬಿಡ ಪ್ರದೇಶದಲ್ಲಿ 4 ಅಂಗಡಿ ಮತ್ತು ಒಂದು ಹೋಟೆಲ್ ಇದೆ. ಸ್ಥಳೀಯ ವ್ಯಕ್ತಿಗಳನ್ನು ಪಂಚರನ್ನಾಗಿ ಕರೆದಿರುವುದಿಲ್ಲ. ಮಹಜರಿನಲ್ಲಿ ಸಹಿ ಹಾಕಿದ ವ್ಯಕ್ತಿ ಬಂಟ್ವಾಳದ ವಾಸಿಯಾಗಿರುತ್ತಾನೆ. ಆತನು ಸ್ಥಳದಲ್ಲಿರಲಿಲ್ಲ, ಆತನು ಸ್ಟಾಕ್ ವಿಟ್ನೆಸ್ ಎನ್ನುವುದು ಸರಿಯಲ್ಲ. ಮಹಜರು ಸ್ಥಳದಲ್ಲಿಯೇ ಬರೆದಿಲ್ಲ ಎಂದರೆ ಸರಿಯಲ್ಲ. ಲಾರಿಯಲ್ಲಿ ಪ್ರತ್ಯೇಕ ಕಂಪಾರ್ಟ್‌ಮೆಂಟ್ ಆಗಲಿ, ಅದರಲ್ಲಿ ಒರಿಜಿನಲ್ ಚಾಯ್ಸ್ ವಿಸ್ಕಿ ಇರಲಿಲ್ಲವೆಂದರೆ ಸರಿಯಲ್ಲ. ಲಾರಿಯನ್ನು ಶೋಧನೆ ಮಾಡಿಲ್ಲವೆಂದರೆ ಸರಿಯಲ್ಲ. ಲಾರಿಯಲ್ಲಿ ತರಕಾರಿ ಇದೆಯೆಂದರೆ ಸರಿಯಲ್ಲ. ವಾಹನದ ಮೇಲೆ ಸುಳ್ಳು ಮೊಕದ್ದಮೆ ಮಾಡಿದ್ದೇನೆ ಹಾಗೂ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂದು ತಮ್ಮ ಸಾಕ್ಷ್ಯವನ್ನು ನೀಡಿರುತ್ತಾರೆ. ಈ ಪಾಟೀ ಸವಾಲಿನಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನ ದೊರೆತಿರುವುದಿಲ್ಲ.

**ಪ್ರಾ.ಸಾ-3:**

ಶ್ರೀ ಜೆ.ಎನ್. ಸೋಮೇಶ್ವರ್ ಅಂದಿನ ಅಬಕಾರಿ ನಿರೀಕ್ಷಕರಾಗಿದ್ದು ಪ್ರಕರಣದ ತನಿಖೆಯನ್ನು ನಡೆಸಿದ್ದು, 11.12.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ದಿನಾಂಕ: 14.10.1998 ರಂದು ಮೊಕದ್ದಮೆಗೆ ಸಂಬಂಧಪಟ್ಟ ದಾಖಲೆಗಳು ಹಾಗೂ ಸ್ಯಾಂಪಲ್ ಬಾಟ್ಲಿಗಳನ್ನು ಅಬಕಾರಿ ನಿರೀಕ್ಷಕರು, ವಿಚಕ್ಷಣ ದಳ ಇವರಿಂದ ಪಡೆದು ದಿನಾಂಕ: 22.10.1998 ರಂದು ಮಾದರಿ ಶೀಷೆಗಳನ್ನು ಅಬಕಾರಿ ರಕ್ಷಕರ ಮೂಲಕ ಕಳುಹಿಸಿ ದಿನಾಂಕ: 21.11.2003 ರಂದು ಅದೇ ರಕ್ಷಕರ ಮೂಲಕ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಪಡೆದಿರುವುದಾಗಿ ತಿಳಿಸಿರುತ್ತಾರೆ. ತನಗೆ ವರ್ಗಾವಣೆಯಾದ ಪ್ರಯುಕ್ತ ಮೊಕದ್ದಮೆಯನ್ನು ಅಬಕಾರಿ ನಿರೀಕ್ಷಕರು, ಕೂಳೂರು ವಲಯ ಇವರಿಗೆ ಹಸ್ತಾಂತರಿಸಿರುವುದಾಗಿ ತಿಳಿಸುತ್ತಾ ರಾಸಾಯನಿಕ ತಜ್ಞರ ವರದಿಯನ್ನು ನೋಡಿರುತ್ತಾರೆ. ಸದ್ರಿ ವರದಿಯನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು. ಈ ಪ್ರಕರಣದಲ್ಲಿ ಅಬಕಾರಿ ಕಾಯ್ದೆ ಕಲಂ 43 ರಡಿಯಲ್ಲಿ ಅಬಕಾರಿ ಉಪ ಆಯುಕ್ತರಿಗೆ ಸಲ್ಲಿಸಿದ್ದ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-4 ಎಂದು ಗುರುತಿಸಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ ಈ ಪ್ರಕರಣದಲ್ಲಿ ರಾಸಾಯನಿಕ ಪರೀಕ್ಷೆಗಾಗಿ ಮಾದರಿ ಶೀಷೆಗಳನ್ನು ಕಳುಹಿಸಿರುವುದಾಗಿ, ಇದನ್ನು ಹೊರತುಪಡಿಸಿ ಬೇರೆ ಯಾವುದೇ ತನಿಖೆಯನ್ನು ಮಾಡಿರುವುದಿಲ್ಲ ಎಂದು ಸಾಕ್ಷಿ ನೀಡಿರುತ್ತಾರೆ. ಈ ಪಾಟೀ ಸವಾಲಿನಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನ ಆಗಿರುವುದಿಲ್ಲ.

**ಪ್ರಾ.ಸಾ-4:**

ಶ್ರೀ ವಿಠಲ ಶೆಟ್ಟಿ, ಅಬಕಾರಿ ರಕ್ಷಕರು ಈ ಪ್ರಾಧಿಕಾರದ ಮುಂದೆ ದಿನಾಂಕ: 8.1.2004 ರಂದು ಹಾಜರಾಗಿ ತನ್ನ ಸಾಕ್ಷ್ಯವನ್ನು ನೀಡಿರುತ್ತಾರೆ. ದಿನಾಂಕ: 22.10.1998 ರಂದು ಈ ತಕ್ಷೀರಿಗೆ ಸಂಬಂಧಿಸಿದ 22 ಮಾದರಿ ಶೀಷೆಗಳನ್ನು ರಾಸಾಯನಿಕ ತಜ್ಞರಿಗೆ ತಲುಪಿಸಿರುತ್ತೇನೆ. ದಿನಾಂಕ: 27.11.1998 ರಂದು ರಾಸಾಯನಿಕ ತಜ್ಞರು ಪರೀಕ್ಷಿಸಿದ 22 ಬಾಟ್ಲಿ ಹಾಗೂ ತಜ್ಞರ ವರದಿಯನ್ನು ಪಡೆದುಕೊಂಡು ಅಬಕಾರಿ ನಿರೀಕ್ಷಕರಿಗೆ ನೀಡಿರುವುದಾಗಿ ತಿಳಿಸಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಈ ಪ್ರಕರಣದ ಮಾದರಿ ಶೀಷೆಗಳ ಮೇಲೆ ಅಂಟಿಸಿರುವ ಚೀಟಿಗಳ ಆಧಾರದ ಮೇಲೆ ನಾನು ಈ ಕೇಸಿಗೆ ಸಂಬಂಧಪಟ್ಟಂತೆ ಹೇಳುತ್ತೇನೆ. ಸದ್ರಿ ಶೀಷೆಗಳನ್ನು ಪಡೆದುದಕ್ಕೆ ಯಾವುದೇ ಹಿಂಬರಹವನ್ನು ಪಡೆದಿರುವುದಿಲ್ಲ ಎಂಬುದಾಗಿ ತಮ್ಮ ಸಾಕ್ಷ್ಯ ನೀಡಿರುತ್ತಾರೆ. ಇವರ ಹೇಳಿಕೆಯಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನ ದೊರೆತಿರುವುದಿಲ್ಲ.

ಈ ಪ್ರಕರಣದ ಸ್ವತಂತ್ರ ಸಾಕ್ಷಿ, ಪ್ರಾ.ಸಾ-1 ಹಾಗೂ ಪ್ರಾ.ಸಾ.2, 3 ಮತ್ತು 4 ಪ್ರಕರಣಕ್ಕೆ ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ: 29.9.1998 ರಂದು ಜಪ್ತುಪಡಿಸಿರುವ ವಾಹನ ಮಿನಿ ಲಾರಿ ಸಂಖ್ಯೆ: ಕೆಎ-35-2222 ರಲ್ಲಿ ಅಕ್ರಮವಾಗಿ ಮದ್ಯವು ಸಾಗಣೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಕ್ರಮ ಮದ್ಯವು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಆದರೆ ಈ ಪ್ರಕರಣದ ವಾಹನದ ಮಾಲೀಕರಾದ ಚಂದ್ರಶೇಖರ ಹಾಗೂ ಅವರ ಜಿ.ಪಿ.ಎ. ಹೋಲ್ಡರಾದ ಸೋಮಶೇಖರ್ ಇವರಿಗೆ ಹಲವಾರು ಬಾರಿ ನೋಟೀಸು ನೀಡಿದ್ದರೂ, ಜಾರಿಯಾಗದೇ ಹಿಂದೆ ಬಂದಿರುತ್ತದೆ. ಅಲ್ಲದೇ ಪ್ರತಿರಕ್ಷಾ ಪರ ಸಾಕ್ಷಿ ವಿಚಾರಣೆ ಮಾಡಲು ಅರ್ಜಿದಾರರ ಪರ ವಕೀಲರಿಗೆ ಪ್ರತಿರಕ್ಷಾ ಸಾಕ್ಷಿಯನ್ನು ಹಾಜರುಪಡಿಸಲು 3 ಬಾರಿ ಸಮಯಾವಕಾಶವನ್ನು ನೀಡಿದ್ದರೂ ಅರ್ಜಿದಾರರ ಪರ ವಕೀಲರು ಪ್ರತಿರಕ್ಷಾ ಸಾಕ್ಷಿಯನ್ನು ವಿಚಾರಣೆಗೆ ಹಾಜರುಪಡಿಸಲು ವಿಫಲರಾಗಿರುತ್ತಾರೆ. ಅಲ್ಲದೆ ವಾಹನ ಮಾಲೀಕರಿಂದ ಅಧಿಕಾರ ಹೊಂದಿದ ಶ್ರೀ ವರದರಾಜು ರವರು ಈ ಪ್ರಾಧಿಕಾರಕ್ಕೆ ತಮ್ಮ ಅರ್ಜಿಯನ್ನು ವಕೀಲರ ಮುಖಾಂತರ ಸಲ್ಲಿಸಿ ಪ್ರಕರಣವನ್ನು ಇಲಾಖಾ ಮುಖಾಂತರ ಇತ್ಯರ್ಥಪಡಿಸಲು ಕೋರಿ ಅರ್ಜಿಯನ್ನು ದಿನಾಂಕ: 6.11.2001 ರಂದು ಸಲ್ಲಿಸಿದ್ದು, ನಂತರ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಈ ಕಾರಣದಿಂದ ವಾಹನ ಮಾಲೀಕರು ತಮ್ಮ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಣೆ ಮಾಡಿರುವುದನ್ನು ಸ್ವತಃ ಒಪ್ಪಿರುತ್ತಾರೆ. ಅಲ್ಲದೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯಾಧಾರಗಳೊಂದಿಗೆ ವಾಹನವನ್ನು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಾಣಿಕೆಗೆ ಉಪಯೋಗಿಸಲಾಗಿದೆ ಎಂದು ರುಜುವಾತು ಪಡಿಸಲು ವಿಫಲರಾಗಿರುವುದರಿಂದ ಹಾಗೂ ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದನ್ನು ಗಮನಿಸಿದಾಗ ವಾಹನ ಮಾಲೀಕರು ತನ್ನ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಮದ್ಯ ಸಾಗಣೆಗೆ ತೊಡಗಿಸಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕರಾತ್ಮಕವಾಗಿ ಪರಿಗಣಿಸಿದೆ.

ಈ ಮೇಲಿನ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನ ಮಿನಿ ಲಾರಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನ ಸಂಖ್ಯೆ: ಕೆಎ-35-2222 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ:400:ಡಿಟಿಸಿಆರ್:1998-1999, ದಿನಾಂಕ: 14ನೇ ಅಕ್ಟೋಬರ್ 2004**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ನಿರೀಕ್ಷಕರು, ನಂ.3 ಇ.ಐ.ಬಿ., ಮಂಗಳೂರು ವಿಭಾಗ ಮಂಗಳೂರು ಇವರ ಮೊಕದ್ದಮೆ ಸಂಖ್ಯೆ: 2/98-99, ದಿನಾಂಕ: 29.9.1998 ರಲ್ಲಿ ವಶಪಡಿಸಿಕೊಂಡಿರುವ ವಾಹನ ಮಿನಿ ಲಾರಿ ಸಂಖ್ಯೆ: ಕೆಎ-35-2222ನ್ನು ನಿಯಮ 43ಎ (2) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 14.10.2004 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಎನ್.ಎಂ. ಹುಸೇನ್**

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.ನಂ.1:- ಶ್ರೀ ಬಿ. ಗೋಪಾಲ, ಬಿನ್ ಮುತ್ತಪ್ಪ ಪೂಜಾರಿ, ವಾಸ: ಅನಂತಾಡಿ, ಬಂಟ್ವಾಳ ತಾಲ್ಲೂಕು.

ಪ್ರಾ.ಸಾ.ನಂ.2:- ಶ್ರೀ ಜಿ.ಕೆ. ಸುಬ್ರಹ್ಮಣ್ಯ, ಅಬಕಾರಿ ನಿರೀಕ್ಷಕರು, ಇ.ಐ.ಬಿ., ಮಂಗಳೂರು.

ಪ್ರಾ.ಸಾ.ನಂ.3:- ಶ್ರೀ ಜೆ.ಎನ್. ಸೋಮೇಶ್ವರ್, ಅಬಕಾರಿ ಉಪ ಅಧೀಕ್ಷಕರು.

ಪ್ರಾ.ಸಾ.ನಂ.4:- ಶ್ರೀ ವಿಠಲ ಶೆಟ್ಟಿ, ಅಬಕಾರಿ ರಕ್ಷಕ, ಕುಲಶೇಖರ ವಲಯ.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ1 : ಮಹಜರು ಪ್ರತಿ

ನಿಶಾನೆ ಪಿ2 : ತಕ್ಷೀರು ತಃಖ್ತೆ ವರದಿ

ನಿಶಾನೆ ಪಿ3 : ರಾಸಾಯನಿಕ ವಿಶ್ಲೇಷಕರ ವರದಿ ಪ್ರತಿ

ನಿಶಾನೆ ಪಿ4 : ಅಬಕಾರಿ ಉಪ ಆಯುಕ್ತರಿಗೆ ಸಲ್ಲಿಸಿದ್ದ ವರದಿ ಕಲಂ 43(ಎ) ಅಡಿಯಲ್ಲಿ.

**ಅನುಬಂಧ-3**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು: ಅರ್ಜಿದಾರರ ಹೇಳಿಕೆ:** - ಯಾವುದೂ ಇಲ್ಲ -

**ಅನುಬಂಧ-4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು: - ಯಾವುದೂ ಇಲ್ಲ -

**ಎನ್.ಎಂ. ಹುಸೇನ್**

ಪಿ.ಆರ್. 1501 ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ಪ್ರಾಧಿಕಾರ**

**ಉಪಸ್ಥಿತರು:** ಜಿ.ಎಸ್. ಕರಿಯಪ್ಪ, ಭಾಅಸೇ, ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

**ಫಿರ್ಯಾದಿದಾರರು:** ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಭರಮಸಾಗರ ಪೊಲೀಸ್ ಠಾಣೆ, ಭರಮಸಾಗರ.

**ವಿರುದ್ಧ**

**ಅಪರಾಧಿಗಳು:** ಶ್ರೀ ಮಹಮ್ಮದ್ ಫಯಾಜ್ ತಂದೆ ಲೇ: ಅಬ್ದುಲ್ ಖಾದರ್ ಸಾಬ್, ಸರಳಗಿ ಗ್ರಾಮ ಹೊನ್ನಾವರ ತಾಲ್ಲೂಕು, ಕಾರಾವಾರ ಜಿಲ್ಲೆ.

**ವಾಹನದ ಮಾಲೀಕರು:** ಶ್ರೀ ಬಾಬಾ ಸಾಹೇಬ್ ಯಶವಂತರಾವ್ ಪಾಟೀಲ್, ಸರೋಡ್ ಗ್ರಾಮ, ಶಹವಾಡಿ ತಾಲ್ಲೂಕು, ಕೊಲ್ಲಾಪುರ ಜಿಲ್ಲೆ, ಮಹಾರಾಷ್ಟ್ರ ರಾಜ್ಯ.

**ಅರ್ಜಿದಾರರ ಪರ ವಕೀಲರು:** ಶ್ರೀ ಬಿ.ಕೆ. ರಹಮತುಲ್ಲಾ, ವಕೀಲರು, ಗಾಂಧಿಸರ್ಕಲ್, ಚಿತ್ರದುರ್ಗ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 16.4.1999 ರಂದು ಭರಮಸಾಗರ ಪೊಲೀಸ್ ಠಾಣೆಯ ಸಿಬ್ಬಂದಿಯು ಠಾಣೆಯ ಜೀಪ್ ಸಂಖ್ಯೆ: ಕೆಎ-16-190 ರಲ್ಲಿ ಎನ್‌ಎಚ್-4 ರಸ್ತೆಯ ಗಸ್ತು ಕಾರ್ಯ ನಡೆಸುತ್ತಾ, ದಿನಾಂಕ: 17.4.1999ರ ಬೆಳಗಿನ ಜಾವ ಸುಮಾರು 2.30ರ ಸಮಯದಲ್ಲಿ ಬೆನ್ನೂರ್ ಸರ್ಕಲ್‌ನಿಂದ ಚಿಕ್ಕ ಬೆನ್ನೂರ್ ಕಡೆ ಬರುತ್ತಿರುವಾಗ ದಾವಣಗೆರೆ ಕಡೆಯಿಂದ ಬರುತ್ತಿದ್ದ ಜೀಪ್‌ನಲ್ಲಿದ್ದವರು ಗಸ್ತು ವಾಹನವನ್ನು ಕಂಡು ಏಕಾಏಕಿ ಚಿಕ್ಕ ಬೆನ್ನೂರು ಎಡಿ ಕಾಲೋನಿ ಕಡೆ ವಾಹನವನ್ನು ವೇಗವಾಗಿ ತಿರುಗಿಸಿ, ವಾಹನವನ್ನು ನಿಲ್ಲಿಸಿ ಇಳಿದು ಓಡಿ ತಪ್ಪಿಸಿಕೊಳ್ಳಲು ಪ್ರಯತ್ನಿಸಿದಾಗ ಪೊಲೀಸ್ ಸಿಬ್ಬಂದಿ ಅವರನ್ನು ಬೆನ್ನಟ್ಟಿ ಒಬ್ಬನನ್ನು ಹಿಡಿಯುವಲ್ಲಿ ಸಫಲವಾಯಿತು. ಸಿಕ್ಕಲ್ಪಟ್ಟವನ ಹೆಸರು ವಿಚಾರಿಸಲಾಗಿ, ಆತನ ಹೆಸರು ಮಹಮ್ಮದ್ ಫಯಾಜ್ ತಂದೆ ಲೇ: ಅಬ್ದುಲ್ ಖಾದರ್ ಸಾಬ್ ಎಂದು ತಿಳಿದು ಬಂದಿತು. ತಪಾಸಿಸಲಾಗಿ ಜೀಪ್ ಮಹೇಂದ್ರ ಮಾರ್ಶಲ್ ಎಂಬುದಾಗಿಯೂ ಜೀಪಿನ ರಿಜಿಸ್ಟ್ರೇಶನ್ ಸಂಖ್ಯೆ: ಎಂಹೆಚ್-10-ಸಿ-4718 ಎಂಬುದಾಗಿ ಹಾಗೂ ಜೀಪಿನ ಹಿಂಭಾಗದಲ್ಲಿ ಗಂಧದ ತುಂಡುಗಳು ಕಂಡು ಬಂದಿರುತ್ತವೆ.

ನಂತರ ಪಂಚರ ಸಮಕ್ಷಮ ಎಂಎಚ್-10-ಸಿ-4718 ಮಹೇಂದ್ರ ಮಾರ್ಶಲ್ ಜೀಪನ್ನು ಹಾಗೂ ಜೀಪಿನಲ್ಲಿದ್ದ ಶ್ರೀಗಂಧದ ತುಂಡುಗಳ ಉದ್ದ, ಸುತ್ತಳತೆ, ತೂಕ ಸಮೇತ ಅಳತೆ ಮಾಡಿ ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್-62ರ ಪ್ರಕಾರ ಎಲ್ಲಾ ವಿಧಿ ವಿಧಾನಗಳನ್ನು ಅನುಸರಿಸಿ ಮಹಜರ್ ನಡೆಸಿ ಕ್ರ.ಸಂ.1 ರಿಂದ 250ರ ವರೆಗೆ ಶ್ರೀಗಂಧದ ತುಂಡುಗಳ ಮೇಲೆ ಕೆಂಪು ವಾರ್ನಿಶ್ ಬಣ್ಣದಿಂದ ನಮೂದಿಸಲಾಗಿದೆ. ಚಿಕ್ಕ ತುಂಡುಗಳ ಮೇಲೆ ಸಂಖ್ಯೆಯನ್ನು ಬರೆದಿರುವುದಿಲ್ಲ. ಶ್ರೀಗಂಧದ ಒಟ್ಟು ತೂಕ 230 ಕೆಜಿ. ಇರುತ್ತದೆ.

ನಂತರ ಎಂಎಚ್-10-ಸಿ-4718 ರಿಜಿಸ್ಟ್ರೇಶನ್ ನಂಬರಿನ ಮಹೇಂದ್ರ ಮಾರ್ಶಲ್ ಜೀಪನ್ನು ಮತ್ತು 230 ಕೆಜಿ ಶ್ರೀಗಂಧವನ್ನು ಅಮಾನತ್ತುಪಡಿಸಿಕೊಂಡು ಕಲಂ 86, 87 ಕರ್ನಾಟಕ ಅರಣ್ಯ ಕಾಯ್ದೆ - 1963 ರೆಡ್‌ವಿತ್-379 ಐಪಿಸಿ ಪ್ರಕಾರ ಕೇಸು ದಾಖಲು ಮಾಡಿಕೊಂಡು ಪ್ರಥಮ ವರ್ತಮಾನ ವರದಿಯನ್ನು ಸಂಬಂಧಪಟ್ಟ ನ್ಯಾಯಾಲಯಕ್ಕೆ ಸಲ್ಲಿಸಿ, ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ಈ ಮಹಜರ್ ಕ್ರಮವನ್ನು ದಿನಾಂಕ: 17.4.2004 ರಂದು ಬೆಳಿಗ್ಗೆ 7.30 ರಿಂದ 10.00 ಘಂಟೆಯ ವರೆಗೆ ಜರುಗಿಸಿರುತ್ತಾರೆ. ತದ ನಂತರ ಅಮಾನತ್ತುಪಡಿಸಿಕೊಂಡಿರುವ ಮಹೇಂದ್ರ ಮಾರ್ಶಲ್ ಜೀಪನ್ನು ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ 230 ಕೆಜಿ ಶ್ರೀಗಂಧವನ್ನು ಈ ಪ್ರಾಧಿಕಾರಕ್ಕೆ ಹಾಜರುಪಡಿಸಿ ಕರ್ನಾಟಕ ಅರಣ್ಯ ಕಾಯ್ದೆ - 1963ರ ಸೆಕ್ಷನ್ 71(ಎ) ಪ್ರಕಾರ ಮುಂದಿನ ಕ್ರಮ ಜರುಗಿಸಲು ಕೋರಿರುತ್ತಾರೆ.

ಈ ಪ್ರಾಧಿಕಾರವು ಸದರಿ ಜೀಪನ್ನು ಮತ್ತು 230 ಕೆಜಿ ಶ್ರೀಗಂಧವನ್ನು ತನ್ನ ವಶದಲ್ಲಿಟ್ಟುಕೊಂಡಿರುವಂತೆ ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ವಲಯ, ಚಿತ್ರದುರ್ಗ ಇವರಿಗೆ ಸೂಚಿಸಿರುತ್ತದೆ. ಅಮಾನತ್ತುಪಡಿಸಿಕೊಂಡಿರುವ ಜೀಪಿನ ಮಾಲೀಕರ ವಿವರ ಮತ್ತು 'ಬಿ' ರಿಜಿಸ್ಟರ್‌ನ ಎಕ್ಸ್‌ಟ್ರಾಕ್ಟ್‌ನ್ನು ಒದಗಿಸಲು ಡೆಪ್ಯುಟಿ ರೀಜನಲ್ ಟ್ರಾನ್ಸ್‌ಪೋರ್ಟ್ ಆಫೀಸರ್, ಸಾಂಗ್ಲಿ, ಮಹಾರಾಷ್ಟ್ರ ಇವರಿಗೆ ಪತ್ರ ಬರೆಯಲಾಗಿತ್ತು. ಸದರಿಯವರು ವಾಹನದ 'ಬಿ' ರಿಜಿಸ್ಟರ್ ಎಕ್ಸ್‌ಟ್ರಾಕ್ಟನ್ನು ಸಲ್ಲಿಸಿದ್ದು, ಮಹೇಂದ್ರ ಜೀಪಿನ ಇಂಜಿನ್ ನಂ. ಡಿಡಬ್ಲ್ಯೂ-121689, ಛಾಸ್ಸಿ ನಂ. ಸಿಎಲ್-550ಎಂಡಿ-2ಎಲ್‌ಡಬ್ಲ್ಯೂ-ಡಿಡಬ್ಲ್ಯೂ-121689 ಇರುತ್ತದೆ. ಇದು ಶ್ರೀ ಬಾಬಾ ಸಾಹೇಬ್ ಯಶವಂತ ಪಾಟೀಲ್, ಯಶವಂತ ನಗರ, ಚಿಖಾಲಿ, ಶಿರಾಲಾ ತಾಲ್ಲೂಕು, ಸಾಂಗ್ಲಿ ಜಿಲ್ಲೆ ಇವರ ಹೆಸರಿನಲ್ಲಿರುತ್ತದೆ.

ಈ ಪ್ರಾಧಿಕಾರವು ಡೆಪ್ಯುಟಿ ರೀಜನಲ್ ಟ್ರಾನ್ಸ್‌ಪೋರ್ಟ್ ಆಫೀಸರ್, ಸಾಂಗ್ಲಿ ರವರು ಸಲ್ಲಿಸಿದ 'ಬಿ' ರಿಜಿಸ್ಟರ್ ಎಕ್ಸ್‌ಟ್ರಾಕ್ಟ್‌ನನ್ವಯ ಶ್ರೀ ಬಾಬಾ ಸಾಹೇಬ್ ಯಶವಂತ ಪಾಟೀಲ್ ಇವರಿಗೆ ಸದರಿ ವಾಹನವು ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದರಿಂದ ವಾಹನವನ್ನು ಸರ್ಕಾರದ ಪರವಾಗಿ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕೆ ಕಾರಣಗಳನ್ನು ನೀಡುವಂತೆ 15 ದಿನಗಳ ಕಾಲಾವಕಾಶ ನೀಡಿ ನೋಟೀಸ್ ಜಾರಿ ಮಾಡಲಾಗಿತ್ತು.

ವಾಹನದ ಮಾಲೀಕರಾದ ಶ್ರೀ ಬಾಬಾ ಸಾಹೇಬ್ ಯಶವಂತ ಪಾಟೀಲ್ ಇವರು ಶ್ರೀ ಬಿ.ಕೆ. ರಹಮತುಲ್ಲಾ, ವಕೀಲರು, ಗಾಂಧಿ ಸರ್ಕಲ್, ಚಿತ್ರದುರ್ಗ ಇವರ ಮುಖಾಂತರ ಮನವಿ ಸಲ್ಲಿಸಿ, ಸದರಿ ವಾಹನವನ್ನು ಮಧ್ಯಂತರ ವಶಕ್ಕೆ ನೀಡುವಂತೆ ಕೋರಿರುತ್ತಾರೆ. ಸದರಿಯವರ ಮನವಿಯನ್ನು ಈ ಪ್ರಾಧಿಕಾರವು ಪರಿಶೀಲಿಸಿ ದಿನಾಂಕ: 19.5.1999ರ ತನ್ನ ಆದೇಶದಲ್ಲಿ ವಾಹನವನ್ನು ಮಾಲೀಕರ ವಶಕ್ಕೆ ತಾತ್ಕಾಲಿಕವಾಗಿ ಕೆಲವು ಷರತ್ತುಗಳನ್ನು ವಿಧಿಸಿ ಬಿಡುಗಡೆ ಮಾಡಿರುತ್ತದೆ.

ನಂತರ ಈ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ದಿನಾಂಕ: 20.12.2001, 9.1.2002, 25.2.2002, 4.3.2002, 19.2.2004, 24.2.2004, 25.2.2004, 9.3.2004, 17.3.2004, 24.3.2004, 28.4.2004, 27.7.2004, 10.8.2004, 28.8.2004 ಮತ್ತು 21.9.2004 ರಂದು ಸಾಕ್ಷಿಗಳನ್ನು ವಿಚಾರಣೆ ನಡೆಸಲಾಯಿತು.

**ಅಭಿಯೋಜನೆ ಪರವಾಗಿ ಸಾಕ್ಷಿಗಳು:**

1. ಶ್ರೀ ಪಿ.ಸಿ. ಬಸವರಾಜು ಬಿನ್ ಚನ್ನಬಸಪ್ಪ - ಪಿಡಬ್ಲ್ಯೂ-1
2. ಶ್ರೀ ಹೆಚ್.ಎನ್. ಕಲ್ಲಪ್ಪ ಬಿನ್ ಹೆಚ್.ಎನ್. ನಿಂಗಪ್ಪ - ಪಿಡಬ್ಲ್ಯೂ-2
3. ಶ್ರೀ ಅಬ್ದುಲ್ ಸುಭಾನ್ ಬಿನ್ ಅಕ್ಬರ್ ಸಾಬ್ - ಪಿಡಬ್ಲ್ಯೂ-3
4. ಶ್ರೀ ಎಲ್. ಚನ್ನೇಗೌಡ ಬಿನ್ ಲಿಂಗೇಗೌಡ - ಪಿಡಬ್ಲ್ಯೂ-4
5. ಶ್ರೀ ಹೆಚ್. ಆಂಜನೇಯ ಬಿನ್ ಹನುಮಂತಬೋವಿ - ಪಿಡಬ್ಲ್ಯೂ-5
6. ಶ್ರೀ ಸೈಯದ್ ಇಸಾಕ್ ಬಿನ್ ಸೈಯದ್ ಹಸನ್ - ಪಿಡಬ್ಲ್ಯೂ-6

**ಪ್ರತಿವಾದಿ (ಅರ್ಜಿದಾರರ) ಪರವಾಗಿ ಸಾಕ್ಷಿಗಳು:**

1. ಶ್ರೀ ಸತ್ಯಜಿತ್ ಬಾಬಾ ಸಾಹೇಬ್ ಪಾಟೀಲ್ ಬಿನ್ ಶ್ರೀ ಬಾಬಾ ಸಾಬ್ ಯಶವಂತ್ ರಾವ್ ಪಾಟೀಲ್.

ಮೇಲ್ಕಂಡ ಸಾಕ್ಷಿದಾರರುಗಳ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಯಿತು. ಅಭಿಯೋಜನೆ ಪರ ಸಹಾಯಕ ಅಭಿಯೋಜಕ ನಿರ್ದೇಶಕರು ಮತ್ತು ಪ್ರತಿ ವಾದಿಗಳ ಪರ ವಕೀಲರು ಇವರು ಮಂಡಿಸಿದ ಲಿಖಿತ ವಾದಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಸೂಕ್ತ ನಿರ್ಣಯ ನೀಡಲು ಈ ಕೆಳಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಯಿತು.

**ಅಂಶ-1:**

ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಳ್ಳಲಾದ ವಾಹನ ಮಹೇಂದ್ರ ಮಾರ್ಶಲ್ ಜೀಪ್ ಸಂಖ್ಯೆ: ಎಂಎಚ್-10-ಸಿ-4718ನ್ನು ಶ್ರೀಗಂಧದ ಸಮೇತ ಅಮಾನತ್ತುಪಡಿಸಲಾಗಿದೆಯೇ? ಅಮಾನತ್ತುಪಡಿಸುವಾಗ ಕರ್ನಾಟಕ ಅರಣ್ಯ ಕಾಯ್ದೆ - 1963ರ ಕಲಂ-62ರ ಪ್ರಕಾರ ಕ್ರಮ ಬದ್ಧವಾಗಿ ಅಮಾನತ್ತುಪಡಿಸಲಾಗಿದೆಯೇ?

**ಅಂಶ-2:**

ಅಮಾನತ್ತುಪಡಿಸಿಕೊಂಡ ಮಹೇಂದ್ರ ಮಾರ್ಶಲ್ ಜೀಪಿನಲ್ಲಿದ್ದ ಮಾಲು ಸರ್ಕಾರ ಸ್ವತ್ತು ಎಂದು ಘೋಷಿಸಲಾಗಿರುವ ಶ್ರೀಗಂಧವೇ?

**ಅಂಶ-3:**

ಅಮಾನತ್ತು ಪಡಿಸಲಾಗಿರುವ ಮಹೇಂದ್ರ ಮಾರ್ಶಲ್ ಜೀಪಿನ ಮಾಲೀಕರು ವಾಹನವನ್ನು ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ಬಳಸಲಾಗಿರುವುದಿಲ್ಲ ಎಂಬುದನ್ನು ಸಾಬೀತುಪಡಿಸಿರುವರೆ ಅಥವಾ ವಾಹನವು ಶ್ರೀಗಂಧದ ಕಳ್ಳಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮ ಕೈಗೊಂಡಿರುವರೆ?

ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.

ಅಂಶ-1 ಸಕಾರಾತ್ಮಕ

ಅಂಶ-2 ಸಕಾರಾತ್ಮಕ

ಅಂಶ-3 ನಕಾರಾತ್ಮಕ

**ಕಾರಣಗಳನ್ನು ಈ ಕೆಳಗೆ ವಿವರಿಸಲಾಗಿದೆ**

**ಅಂಶ-1:**

ಶ್ರೀ ಅಬ್ದುಲ್ ಸುಭಾನ್, ಪೊಲೀಸ್ ಅಸಿಸ್ಟೆಂಟ್ ಸಬ್ ಇನ್ಸ್‌ಪೆಕ್ಟರ್, ಭರಮ ಸಾಗರ ಪೊಲೀಸ್ ಠಾಣೆ, ಭರಮಸಾಗರ ಇವರು ರಾಷ್ಟ್ರೀಯ ಹೆದ್ದಾರಿ-4 ರಲ್ಲಿ ಗಸ್ತು ಮಾಡುತ್ತಿದ್ದಾಗ ದಿನಾಂಕ: 17.4.1999ರ ರಾತ್ರಿ ಸುಮಾರು 2.30 ಸಮಯದಲ್ಲಿ ಕಾತ್ರಾಳು ಕೆರೆಯಿಂದ ಹೋಗುತ್ತಿದ್ದಾಗ ಚಿಕ್ಕ ಬೆನ್ನೂರು ಗ್ರಾಮದ ಹತ್ತಿರ ಜೀಪ್ ಒಂದು ಗಸ್ತು ವಾಹನವನ್ನು ನೋಡಿದ ತಕ್ಷಣ ಚಿಕ್ಕ ಬೆನ್ನೂರು ಗ್ರಾಮದ ಎಡಿ ಕಾಲೋನಿ ಕಡೆ ತಿರುಗಿದಾಗ ಅನುಮಾನದಿಂದ ಹಿಂಬಾಲಿಸಿದಾಗ ಜೀಪಿನಲ್ಲಿದ್ದ ಜನರು ಇಳಿದು ಓಡಲು ಪ್ರಾರಂಭಿಸಿದಾಗ, ಒಬ್ಬನನ್ನು ಹಿಡಿದು ವಶಕ್ಕೆ ತೆಗೆದುಕೊಳ್ಳಲಾಯಿತು. ಅವನನ್ನು ವಿಚಾರಿಸಲಾಗಿ ಅವನ ಪೂರ್ಣ ಹೆಸರು ಮಹಮ್ಮದ್ ಫೈಯಾಜ್ ತಂದೆ ಲೇ: ಅಬ್ದುಲ್ ಖಾದರ್ ಸಾಬ್ ಎಂದು, ಓಡಿ ಹೋದವರ ಹೆಸರುಗಳು ಶಫೀ, ಮುಕ್ತಿಯಾರ್ ಮತ್ತು ರಮೇಶ್ ಎಂದು ತಿಳಿದು ಬಂದಿದೆ. ವಶಕ್ಕೆ ತೆಗೆದು ಕೊಂಡ ವ್ಯಕ್ತಿಯೊಂದಿಗೆ ವಾಹನದ ಬಳಿ ಬಂದು ವಾಹನದಲ್ಲಿ ಏನಿದೆ ಎಂದು ವಿಚಾರಿಸಲಾಗಿ, ಅದರಲ್ಲಿ ಶ್ರೀಗಂಧದ ತುಂಡುಗಳು ಇವೆ ಎಂಬುದಾಗಿ ತಿಳಿಸಿದರು. ನಂತರ ಜೀಪನ್ನು ಪರಿಶೀಲಿಸಲಾಗಿ ಜೀಪು ಮಹೇಂದ್ರ ಮಾರ್ಶಲ್ ಹಾಗೂ ಅದರ ರಿಜಿಸ್ಟ್ರೇಶನ್ ಸಂಖ್ಯೆ: ಎಂಎಚ್-10-ಸಿ-4718 ಎಂಬುದಾಗಿ ತಿಳಿಯಿತು. ಜೀಪಿನಲ್ಲಿ ಶ್ರೀಗಂಧದ ತುಂಡುಗಳು ಇದ್ದದ್ದು ಕಾಣಿಸಿತು. ಆಗ ಊರಿನ ಜನ ಜೀಪಿನ ಸುತ್ತಾ ಸೇರಿದರು ನಂತರ ವಶಕ್ಕೆ ತೆಗೆದುಕೊಂಡ ವ್ಯಕ್ತಿಯನ್ನು ವಿಚಾರಿಸಲಾಗಿ ಶ್ರೀಗಂಧದ ತುಂಡುಗಳನ್ನು ರಿಪ್ಪನ್‌ಪೇಟೆ ಹತ್ತಿರ ಇರುವ ಕಾಡಿನಿಂದ ತಂದಿರುವುದಾಗಿ ಮತ್ತು ಶ್ರೀಗಂಧದ ತುಂಡುಗಳನ್ನು ಆಂಧ್ರ ಪ್ರದೇಶದ ಅಮರಾಪುರ ಶ್ರೀಗಂಧದ ಫ್ಯಾಕ್ಟರಿಗೆ ಸಾಗಿಸುತ್ತಿರುವುದಾಗಿ ತಿಳಿಸಿದರು. ಶ್ರೀಗಂಧದ ಸಾಗಾಣಿಕೆಗಾಗಿ ಅಧಿಕೃತ ಪರವಾನಿಗೆ ಇದೆಯೇ ಎಂದು ವಿಚಾರಿಸಲಾಗಿ, ಆತನು ಯಾವುದೇ ಅಧಿಕೃತ ಪರವಾನಿಗೆ ಇಲ್ಲವೆಂದು ತಿಳಿಸಿದಾಗ, ಸದರಿ ಅಸಿಸ್ಟೆಂಟ್ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ರವರು ನಿಸ್ತಂತು ಮೂಲಕ ಭರಮಸಾಗರ ಪೊಲೀಸ್ ಠಾಣೆ ಸಬ್‌ಇನ್ಸ್‌ಪೆಕ್ಟರ್ ರವರಿಗೆ ಮಾಹಿತಿ ನೀಡಿ ವಾಹನವನ್ನು ಹಿಡಿದ ಸ್ಥಳದಲ್ಲಿ ಕತ್ತಲು ಇದ್ದುದರಿಂದ ಸ್ಥಳದಲ್ಲಿ ಯಾವುದೇ ಮಹಜರ್ ನಡೆಸದೆ ಸ್ಥಳದಲ್ಲಿ ದೊರೆತ ಜೀಪು, ಆರೋಪಿ ಮತ್ತು ಶ್ರೀಗಂಧವನ್ನು ಭರಮಸಾಗರ ಪೊಲೀಸ್ ಠಾಣೆಯ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಶ್ರೀ ಸೈಯದ್ ಇಸಾಕ್ ರವರ ಮುಂದೆ ಮುಂದಿನ ಕ್ರಮಕ್ಕಾಗಿ ಹಾಜರು ಪಡಿಸಿ ವರದಿ ನೀಡಿರುತ್ತಾರೆ. ಆಗ ಸಮಯ ಬೆಳಗಿನ ಜಾವ 6.30 ಸಮಯವಾಗಿತ್ತು.

ಶ್ರೀ ಸೈಯದ್ ಇಸಾಕ್, ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಭರಮಸಾಗರ ಪೊಲೀಸ್ ಠಾಣೆ, ಭರಮಸಾಗರ ಇವರು ಶ್ರೀ ಅಬ್ದುಲ್ ಸುಬಾನ್ ಸಹಾಯಕ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಇವರು ನೀಡಿದ ವರದಿಯನ್ವಯ ಭರಮಸಾಗರ ಪೊಲೀಸ್ ಠಾಣೆ ಗುನ್ನೆ ಸಂಖ್ಯೆ: 102/99 ಕಲಂ 379 ಐಪಿಸಿ ಮತ್ತು ಕಲಂ 86, 87 ಕರ್ನಾಟಕ ಅರಣ್ಯ ಕಾಯ್ದೆ ಪ್ರಕಾರ ಪ್ರಕರಣ ದಾಖಲಿಸಿಕೊಂಡಿರುತ್ತಾರೆ.

ಠಾಣೆಗೆ ಪಂಚರನ್ನು ಬರಮಾಡಿಕೊಂಡು ಪಂಚರ ಸಮಕ್ಷಮ ಜೀಪಿನಲ್ಲಿದ್ದ ಶ್ರೀಗಂಧದ ತುಂಡುಗಳನ್ನು ಪರಿಶೀಲಿಸಿ ತೂಕ ಮಾಡಿ ತೂಕದೊಂದಿಗೆ ಕೆಂಪು ಬಣ್ಣದಲ್ಲಿ ಕ್ರಮ ಸಂಖ್ಯೆ: 1 ರಿಂದ 250ರ ವರೆಗೆ ನಮೂದಿಸಿ ಪಂಚನಾಮೆಯನ್ನು ಮಾಡಿರುತ್ತಾರೆ. ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಗಳ ಒಟ್ಟು ತೂಕ 230 ಕೆಜಿ ಆಗಿರುತ್ತದೆ. ನಂತರ ವಾಹನ ಮಹೇಂದ್ರ ಮಾರ್ಶಲ್ ಜೀಪು ಸಂಖ್ಯೆ: ಎಂಎಚ್-10-ಸಿ-4718, 230 ಕೆಜಿ

ಶ್ರೀಗಂಧವನ್ನು ಅಮಾನತ್ತುಪಡಿಸಿಕೊಂಡು ಆರೋಪಿಯನ್ನು ದಸ್ತಗಿರಿ ಮಾಡಿರುತ್ತಾರೆ. ನಂತರ ಅಮಾನತ್ತುಪಡಿಸಿಕೊಂಡ ಮಾಲನ್ನು ಠಾಣಾ ಮಾಲುಪಟ್ಟಿ ಸಂಖ್ಯೆ: 51/99 ರಲ್ಲಿ ನಮೂದಿಸಿರುತ್ತಾರೆ. ಪ್ರಥಮ ಮಾಹಿತಿ ವರದಿಯೊಂದಿಗೆ ಆರೋಪಿಯನ್ನು ನ್ಯಾಯಾಲಯದ ಮುಂದೆ ಹಾಜರುಪಡಿಸಿರುತ್ತಾರೆ.

ಒಟ್ಟಿನಲ್ಲಿ ವಾಹನ ಮಹೇಂದ್ರ ಮಾರ್ಶಲ್ ಜೀಪು ಸಂಖ್ಯೆ: ಎಂಎಚ್-10-ಸಿ-4718 ಮತ್ತು ಶ್ರೀಗಂಧವನ್ನು ಅಮಾನತ್ತುಪಡಿಸುವಾಗ ಹಾಗೂ ಮಹಜರ್ ನಡೆಸುವಾಗ ಕಲಂ 62 ಕನಾಟಕ ಅರಣ್ಯ ಕಾಯ್ದೆ - 1963ರ ಪ್ರಕಾರ ನಿಯಮಗಳನ್ನು ಪಾಲಿಸಿರುತ್ತಾರೆ.

ಸದರಿ ಪ್ರಕರಣವು ಅರಣ್ಯ ಕಾಯ್ದೆಗಳ ಉಲ್ಲಂಘನೆಗೆ ಸಂಬಂಧಪಟ್ಟಿದ್ದರಿಂದ ಮುಂದಿನ ನಡವಳಿಕೆಗಳನ್ನು ನಡೆಸುವ ಬಗ್ಗೆ ವಾಹನ ಮತ್ತು ಅದರಲ್ಲಿದ್ದ ಶ್ರೀಗಂಧವನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ. ಅಮಾನತ್ತುಪಡಿಸಿಕೊಳ್ಳಲಾದ ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ಇವರು ಪರಿಶೀಲಿಸಿ, ಶ್ರೀಗಂಧವೆಂದು ದೃಢೀಕರಿಸಿರುತ್ತಾರೆ.

ವಿಚಾರಣಾ ಸಮಯದಲ್ಲಿ ಪ್ರಾಸಿಕ್ಯೂಷನ್ ಸಾಕ್ಷಿ 6 ಶ್ರೀ ಸೈಯದ್ ಇಸಾಕ್, ಭರಮಸಾಗರ ಪೊಲೀಸ್ ಠಾಣೆಯ ಸಬ್‌ಇನ್ಸ್‌ಪೆಕ್ಟರ್ ರವರು ಮಹಜರ್ ನಿಶಾನೆ-ಪಿ1 ಮತ್ತು ಅದರಲ್ಲಿದ್ದ ಸಹಿ ನಿಶಾನೆ-ಪಿ1(ಸಿ) ಎಂಬುದನ್ನು ಗುರುತಿಸಿರುತ್ತಾರೆ ಹಾಗೂ ಅಮಾನತ್ತುಪಡಿಸಿಕೊಂಡ ಜೀಪು, ಶ್ರೀಗಂಧದ ತುಂಡುಗಳು, ಚಕ್ಕೆ ಹಾಗೂ ಚಿಕ್ಕ ಪುಸ್ತಕವನ್ನು ನೋಡಿದರೆ ಗುರುತಿಸುತ್ತೇನೆಂದು ಸಾಕ್ಷಿ ನುಡಿದಿರುತ್ತಾರೆ. ಹಾಗೂ ಅದೇ ಜೀಪು ಈ ಪ್ರಾಧಿಕಾರದ ಮುಂದೆ ಇರುವುದಾಗಿ ಸಾಕ್ಷಿ ಹೇಳಿರುತ್ತಾರೆ. ಸದರಿ ಜೀಪು ಮುದ್ದೇಮಾಲು-1 ಎಂದು ಗುರುತಿಸಲಾಗಿದೆ. ಚಿಕ್ಕ ಪುಸ್ತಕವನ್ನು ಗುರುತಿಸಿದ್ದು, ಅದನ್ನು ನಿಶಾನೆ-ಪಿ4 ಎಂದು ಗುರುತಿಸಲಾಯಿತು. ಶ್ರೀಗಂಧದ ಸ್ಯಾಂಪಲ್ ತುಂಡನ್ನು ಗುರುತಿಸಿದರು. ಸದರಿ ತುಂಡನ್ನು ಮುದ್ದೇಮಾಲು-2 ಎಂದು ಗುರುತಿಸಲಾಯಿತು. ಮಾಲು ಪಟ್ಟಿಯನ್ನು ನಿಶಾನೆ-ಪಿ5 ಎಂದು ಗುರುತಿಸಲಾಗಿದೆ. ಶ್ರೀ ಅಬ್ದುಲ್ ಸುಭಾನ್, ಅಸಿಸ್ಟೆಂಟ್ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಅವರ ವರದಿಯನ್ನು ಗುರುತಿಸಿದ್ದು, ಅದನ್ನು ನಿಶಾನೆ-ಪಿ2 ಎಂದು ಗುರುತಿಸಲಾಗಿದೆ. ಪ್ರಥಮ ವರ್ತಮಾನ ವರದಿಯನ್ನು ಗುರುತಿಸಿದ್ದು, ಅದನ್ನು ನಿಶಾನೆ-ಪಿ6 ಎಂದು ಗುರುತಿಸಿದ್ದು ಅದರಲ್ಲಿದ್ದ ಅವರ ಸಹಿಯನ್ನು ನಿಶಾನೆ-ಪಿ6(ಎ) ಎಂದು ಗುರುತಿಸಲಾಗಿದೆ. ಪ್ರಾಧಿಕಾರಕ್ಕೆ ಅವರು ಸಲ್ಲಿಸಿದ್ದ ವರದಿಯನ್ನು ಗುರುತಿಸಿದ್ದು, ಅದನ್ನು ನಿಶಾನೆ-ಪಿ7 ಎಂದು ಗುರುತಿಸಲಾಗಿದೆ. ಅದರಲ್ಲಿದ್ದ ಅವರ ಸಹಿಯನ್ನು ಗುರುತಿಸಿದ್ದು ಅದನ್ನು ನಿಶಾನೆ-ಪಿ7(ಎ) ಎಂದು ಗುರುತಿಸಲಾಗಿದೆ. ತನಿಖೆ ಪೂರ್ಣಗೊಂಡ ನಂತರ ಅವರು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದ ಆಪಾದನೆ ಪಟ್ಟಿಯ ಪ್ರತಿ ಮತ್ತು ವರದಿಯನ್ನು ಅದರಲ್ಲಿದ್ದ ಅವರ ಸಹಿಯನ್ನು ಗುರುತಿಸಿದರು. ಅವುಗಳನ್ನು ಅನುಕ್ರಮವಾಗಿ ನಿಶಾನೆ-ಪಿ8 ಮತ್ತು ಪಿ9 ಎಂದು ಗುರುತಿಸಲಾಯಿತು.

ಸದರಿ ಸಾಕ್ಷಿದಾರರನ್ನು ಶ್ರೀ ಬಿ.ಕೆ. ರಹಮತುಲ್ಲಾ, ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ ಪ್ರಥಮ ವರ್ತಮಾನ ವರದಿಯಲ್ಲಿ ವಾಹನದ ಮಾಲೀಕರ ಹೆಸರು ಮತ್ತು ವಿಳಾಸವನ್ನು ನಮೂದಿಸಿಲ್ಲವೆಂದು ತಿಳಿಸಿರುತ್ತಾರೆ. ಆರೋಪಿ ಫಯಾಜ್ ಕೊಟ್ಟ ಸ್ವಇಚ್ಛಾ ಹೇಳಿಕೆಯಲ್ಲಿ ಮುಕ್ತಿಯಾರ್ ಎಂಬುವನು ತನ್ನ ಹತ್ತಿರವಿರುವ ಜೀಪಿನಲ್ಲಿ ನಾನು, ನೀನು ಮತ್ತು ಸ್ನೇಹಿತರಾದ ಶಫಿ, ರಮೇಶ್ 4 ಜನ ಸೇರಿ ಶ್ರೀಗಂಧದ ತುಂಡುಗಳನ್ನು ಆಂಧ್ರದ ಹತ್ತಿರವಿರುವ ಅಮರಾಪುರದಲ್ಲಿ ಮಾರಾಟ ಮಾಡಿ ಬಂದ ಹಣದಲ್ಲಿ ಪಾಲುಮಾಡುವುದಾಗಿ ಹೇಳಿರುವುದು ಸರಿ ಎಂದು ಹೇಳಿಕೆ ಕೊಟ್ಟಿರುತ್ತಾರೆ. ಆರೋಪಿ ಮಹಮ್ಮದ್ ಫಯಾಜ್ ಈ ಕೇಸಿನಲ್ಲಿ ಅಮಾನತ್ತುಪಡಿಸಿಕೊಂಡ ಜೀಪನ್ನು ಕಳ್ಳತನ ಮಾಡಿಕೊಂಡು, ಮಾಲೀಕರ ಗಮನವಿಲ್ಲದೆ ಕದ್ದು ಶ್ರೀಗಂಧದ ಕಳ್ಳ ಸಾಗಾಣಿಕೆಗೆ ಉಪಯೋಗಿಸಿರುತ್ತಾರೆ ಎಂಬುದು ಹಾಗೂ ಶಹವಾಡಿ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ: 20/99 ಭಾರತೀಯ ದಂಡ ಸಂಹಿತೆ ಕಲಂ 379 ರಡಿಯಲ್ಲಿ ಪ್ರಕರಣ ದಾಖಲಾಗಿದ್ದು, ನಂತರ ತನಿಖಾಧಿಕಾರಿಗಳು ತನಿಖೆ ನಡೆಸಿ ಆರೋಪಿ ಮಹಮ್ಮದ್ ಫಯಾಜ್ ವಿರುದ್ಧ ಸಂಬಂಧಪಟ್ಟ ನ್ಯಾಯಾಲಯದಲ್ಲಿ ಸಿಸಿ ಸಂಖ್ಯೆ: 18/02 ರಲ್ಲಿ ನೋಂದಾಯಿಸಿ ಪ್ರಕರಣವನ್ನು ವಿಚಾರಣೆಗೆ ಕೈಗೆತ್ತಿಕೊಂಡಿರುವ ವಿಚಾರ ತನಗೆ ಗೊತ್ತಿಲ್ಲ ಎಂದು ತಿಳಿಸಿರುತ್ತಾರೆ. ಈ ಕೇಸಿನ ಆರೋಪಿತರಿಗೂ ಮತ್ತು ವಾಹನದ ಮಾಲೀಕರಿಗೂ ಯಾವುದೇ ರೀತಿಯ ಸಂಬಂಧ ಇಲ್ಲ ಎಂದರೆ ಅದು ನನಗೆ ಗೊತ್ತಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಸ್ಥಳದಲ್ಲಿ ಮಹಜರ್ ಮಾಡಿಲ್ಲ, ಶ್ರೀಗಂಧವನ್ನು ಅಮಾನತ್ತುಪಡಿಸಿಲ್ಲ, ಆರೋಪಿಯ ಮೇಲೆ ಸುಳ್ಳು ಪ್ರಕರಣ ದಾಖಲಿಸಿರುತ್ತೇನೆ ಎನ್ನುವುದು ಸುಳ್ಳು ಎಂದು ತಿಳಿಸಿರುತ್ತಾರೆ.

ಪ್ರಾಸಿಕ್ಯೂಶನ್ ಸಾಕ್ಷಿ: ಪಿ3 ಶ್ರೀ ಅಬ್ದುಲ್ ಸುಬಾನ್ ಇವರನ್ನು ಸಹಾಯಕ ಅಭಿಯೋಜಕ ನಿರ್ದೇಶಕರು ನಡೆಸಿದ ಮುಖ್ಯ ವಿಚಾರಣೆಯಲ್ಲಿ ನೀಡಿರುವ ಹೇಳಿಕೆಯು ಪ್ರಾಸಿಕ್ಯೂಶನ್ ಸಾಕ್ಷಿ-6 ಶ್ರೀ ಸೈಯದ್ ಇಸಾಕ್ ರವರ ಹೇಳಿಕೆಗೆ ಪುಷ್ಟಿ ನೀಡುತ್ತದೆ. ಸದರಿ ಸಾಕ್ಷಿಯು ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ರವರಿಗೆ ನೀಡಿದ ವರದಿಯನ್ನು ಗುರುತಿಸಿದ್ದು, ಅದು ನಿಶಾನೆ-ಪಿ2 ಆಗಿರುತ್ತದೆ ಹಾಗೂ ಅಮಾನತ್ತುಪಡಿಸಿಕೊಂಡ ವಾಹನವನ್ನು ಗುರುತಿಸುವುದಾಗಿಯೂ ಸದರಿ ವಾಹನವು ಮುದ್ದೇಮಾಲು-1 ಎಂಬುದಾಗಿಯೂ, ಶ್ರೀಗಂಧದ ತುಂಡುಗಳನ್ನು ಮುದ್ದೇಮಾಲು-2 ಎಂಬುದಾಗಿ ಗುರುತಿಸಿರುತ್ತಾರೆ ಮತ್ತು ಸದರಿ ದಿನ ಹಿಡಿದ ವ್ಯಕ್ತಿಯನ್ನು ಗುರುತಿಸುವುದಾಗಿ ಹೇಳಿರುತ್ತಾರೆ.

ಪಾಟೀ ಸವಾಲಿನಲ್ಲಿ, ಜೀಪನ್ನು ಹಿಡಿದ ಸ್ಥಳದಲ್ಲಿ ಅನಿವಾರ್ಯ ಕಾರಣಗಳಿಂದ ಮಹಜರ್ ಜರುಗಿಸಿಲ್ಲವೆಂದು ಹಾಗೂ ತನ್ನ ಹೆಸರನ್ನು ಆಪಾದನೆ ಪಟ್ಟಿಯಲ್ಲಿ ಸಾಕ್ಷಿಯಾಗಿ ನಮೂದಿಸಲಾಗಿದೆ ಎಂದು ತಿಳಿಸಿರುತ್ತಾರೆ. ಶ್ರೀ ಸೈಯದ್ ಇಸಾಕ್ ರವರ ಆದೇಶದಂತೆ ಶಹವಾಡಿ ಪೊಲೀಸ್ ಠಾಣೆಗೆ ಹೋಗಿದ್ದಾಗಿಯೂ ತಿಳಿಸಿರುತ್ತಾರೆ. ಅಲ್ಲಿ ಜೀಪು ಕಾಣೆಯಾದ ಬಗ್ಗೆ ಕಂಪ್ಲೆಂಟ್ ಕೊಟ್ಟಿರುವುದಾಗಿ ತಿಳಿಸಿದ್ದಾಗಿಯೂ, ಸದರಿ ಜೀಪು ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ ವಾಹನವಾಗಿರುವುದಾಗಿಯೂ ತಿಳಿಸಿರುತ್ತಾರೆ. ಶ್ರೀಗಂಧದ ಕಳ್ಳತನಕ್ಕೂ ಹಾಗೂ ಮಾಲೀಕರಿಗೂ ಸಂಬಂಧ ಇಲ್ಲ ಎಂಬುದು ತಮಗೆ ಗೊತ್ತಿಲ್ಲವೆಂದು ತಿಳಿಸಿರುತ್ತಾರೆ. ಸದರಿ ಪ್ರಕರಣದಲ್ಲಿ ತಾನು ಸ್ಥಳದಲ್ಲಿ ಜೀಪು, ಶ್ರೀಗಂಧ, ಆಸಾಮಿಗಳನ್ನು ಹಿಡಿದಿಲ್ಲ, ಸುಳ್ಳುವರದಿ ನೀಡಿದ್ದೇನೆ ಎಂಬುದು ಸುಳ್ಳು ಎಂದು ಸಾಕ್ಷಿ ನುಡಿದಿರುತ್ತಾರೆ.

ಪ್ರಾಸಿಕ್ಯೂಶನ್ ಸಾಕ್ಷಿ-1 ಶ್ರೀ ಪಿ.ಸಿ. ಬಸವರಾಜು ಇವರನ್ನು ಸಹಾಯಕ ಅಭಿಯೋಜಕ ನಿರ್ದೇಶಕರು ನಡೆಸಿದ ಮುಖ್ಯ ವಿಚಾರಣೆಯಲ್ಲಿ ದಿನಾಂಕ: 17.4.99 ರಂದು ಬೆಳಿಗ್ಗೆ 7.30ಕ್ಕೆ ಭರಮಸಾಗರ ಠಾಣೆಯ ಸಹಾಯಕ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಅಬ್ದುಲ್ ಸುಭಾನ್ ರವರು ನನ್ನನ್ನು ಕರೆಸಿದ್ದಾಗಿಯೂ ಅಲ್ಲಿ ಹೋದಾಗ ವಾಹನ ಸಂಖ್ಯೆ: ಎಂಎಚ್-10-ಸಿ-4718 ಮಹೇಂದ್ರ ಜೀಪಿನ ಹಿಂಬದಿಯಲ್ಲಿದ್ದ 230 ಕೆಜಿ ಶ್ರೀಗಂಧವನ್ನು ನನ್ನ ಸಮಕ್ಷಮ ತನಿಖೆ ಮಾಡಿ, ಎಣಿಸಿ ತೂಕ ಮಾಡಿ ನೋಡಲಾಗಿ, 230 ಕೆಜಿ ತೂಕ ಶ್ರೀಗಂಧ ಇದ್ದುದಾಗಿಯೂ, ವಾಹನದಲ್ಲಿದ್ದ ಚಿಕ್ಕ ಪುಸ್ತಕವನ್ನು ಪೊಲೀಸರು ವಶಪಡಿಸಿಕೊಂಡಿದ್ದಾಗಿಯೂ ತಿಳಿಸಿರುತ್ತಾರೆ. ಮಹಜರ್‌ಗೆ ಸಹಿ ಮಾಡಿದ್ದಾಗಿಯೂ, ಮಹಜರ್‌ನಲ್ಲಿನ ಸಹಿಯನ್ನು ಅವರದೆಂದು ಗುರುತಿಸಿರುತ್ತಾರೆ. ಅದನ್ನು ನಿಶಾನೆ-ಪಿ1(ಎ) ಎಂದು ಗುರುತಿಸಲಾಯಿತು. ಅಮಾನತ್ತುಪಡಿಸಿಕೊಂಡ ವಾಹನ ಮತ್ತು ಶ್ರೀಗಂಧದ ತುಂಡುಗಳನ್ನು ಗುರುತಿಸುವುದಾಗಿ ತಿಳಿಸಿರುತ್ತಾರೆ.

ಪಾಟೀ ಸವಾಲಿನಲ್ಲಿ ಶ್ರೀ ಹೆಚ್.ಎನ್. ಕಲ್ಲಪ್ಪನವರೊಂದಿಗೆ ದಿನಾಂಕ: 17.4.99ರ ಬೆಳಿಗ್ಗೆ ಭರಮಸಾಗರ ಪೊಲೀಸ್ ಠಾಣೆಗೆ ಹೋಗಿರಲಿಲ್ಲ ಎಂದರೆ ಅದು ಸುಳ್ಳು ಎಂಬುದಾಗಿಯೂ, ಬಸ್‌ಸ್ಟ್ಯಾಂಡಿನಲ್ಲಿದ್ದಾಗ ಅವರನ್ನು ಪೊಲೀಸ್ ಠಾಣೆಗೆ ಕರೆಸಿದ್ದಾಗಿಯೂ ತಿಳಿಸಿರುತ್ತಾರೆ. ಠಾಣೆಯಲ್ಲಿ ಜೀಪಿನ ಹಿಂಬದಿಯಿದ್ದ ಶ್ರೀಗಂಧವನ್ನು ತೋರಿಸಿಲ್ಲ ಎಂದರೆ, ಎಣಿಕೆ ಮಾಡಿಲ್ಲ ಎಂದರೆ ಅದು ಸುಳ್ಳು ಮಹಜರ್ ಕಾಲಕ್ಕೆ ನಾನು ಹಾಜರಿರಲಿಲ್ಲ ಎಂದರೆ ಅದು ಸರಿಯಲ್ಲ ಎಂದು ಹೇಳಿಕೆ ನೀಡಿರುತ್ತಾರೆ. ನನ್ನ ಮುಂದೆ ಪೊಲೀಸರು ಜೀಪನ್ನಾಗಲೀ, ಶ್ರೀಗಂಧವನ್ನಾಗಲೀ ಅಮಾನತ್ತುಪಡಿಸಿಕೊಂಡಿಲ್ಲ ಎಂದರೆ ಅದು ಸುಳ್ಳು ಎಂದು ತಿಳಿಸಿರುತ್ತಾರೆ.

ಪ್ರಾಸಿಕ್ಯೂಶನ್ ಸಾಕ್ಷಿ-ಪಿ2 ಶ್ರೀ ಹೆಚ್.ಎನ್. ಕಲ್ಲಪ್ಪ ಇವರು ಮುಖ್ಯ ವಿಚಾರಣೆಯಲ್ಲಿ ಹಾಗೂ ಪಾಟೀ ಸವಾಲಿನ ಸಮಯದಲ್ಲಿ ನೀಡಿರುವ ಸಾಕ್ಷಿಯು ಪ್ರಾಸಿಕ್ಯೂಶನ್ ಸಾಕ್ಷಿ-ಪಿ1ರ ಹೇಳಿಕೆಯಂತೆಯೇ ಇರುತ್ತದೆ.

ಶ್ರೀ ಎಲ್. ಚನ್ನೇಗೌಡ, ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ರವರು ವಾಹನದಲ್ಲಿ ಅಮಾನತ್ತುಪಡಿಸಿಕೊಂಡ ಮಾಲನ್ನು ಪರಿಶೀಲಿಸಿ ಅದು ಶ್ರೀಗಂಧವೇ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ ಇದು ಮುದ್ದೇಮಾಲು-2 ಎಂದು ಗುರುತಿಸಲಾಗಿದೆ.

ಮೇಲ್ಕಂಡ ಎಲ್ಲಾ ಪ್ರಾಸಿಕ್ಯೂಷನ್ ಸಾಕ್ಷಿಗಳ ಹೇಳಿಕೆಯನ್ನು ಪರಿಶೀಲಿಸಿದಾಗ ಈ ಪ್ರಕರಣದಲ್ಲಿ ಮಹೇಂದ್ರ ಮಾರ್ಷಲ್ ಜೀಪ್ ಸಂಖ್ಯೆ: ಎಂಎಚ್-10-ಸಿ-4718ನ್ನು ಶ್ರೀಗಂಧದ ಸಮೇತ ವಶಪಡಿಸಿಕೊಂಡಿರುವುದು ಖಚಿತವಾಗಿದೆ ಹಾಗೂ ಕರ್ನಾಟಕ ಅರಣ್ಯ ಕಾಯ್ದೆ-1963ರ ಕಲಂ-62ರ ಪ್ರಕಾರ ಕ್ರಮಬದ್ಧವಾಗಿ ಅಮಾನತ್ತು ಪಡಿಸಲಾಗಿದೆ ಎಂಬುದು ದೃಢಪಟ್ಟಿರುತ್ತದೆ.

**ಅಂಶ-2:**

ಕಲಂ-80, 84 ಕರ್ನಾಟಕ ಫಾರೆಸ್ಟ್ ಆ್ಯಕ್ಟ್-1963ರ ಪ್ರಕಾರ ಶ್ರೀಗಂಧವು ಎಲ್ಲಿ ಬೆಳೆದರೂ ರಾಜ್ಯ ಸರ್ಕಾರದ ಸ್ವತ್ತಾಗಿರುತ್ತದೆ. ಸೆಕ್ಷನ್-50 ಕರ್ನಾಟಕ ಫಾರೆಸ್ಟ್ ಆ್ಯಕ್ಟ್-1963 ರೆಡ್‌ವಿತ್ ಕರ್ನಾಟಕ ಫಾರೆಸ್ಟ್ ರೂಲ್ಸ್-1969, ರೂಲ್ 154 ಮತ್ತು 155 ಪ್ರಸ್ತುತ ಪಡಿಸುವುದೇನೆಂದರೆ, ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ಪ್ರಕರಣ ದಾಖಲಾದ ಬಳಿಕ ಅಂತಹ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಶ್ರೀಗಂಧವನ್ನು ರಾಜ್ಯ ಸರ್ಕಾರದ ಸ್ವತ್ತು ಎಂದೇ ಪರಿಗಣಿಸಲಾಗುತ್ತದೆ. ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ಇವರು ಅಮಾನತ್ತುಪಡಿಸಿಕೊಂಡ ಮಾಲನ್ನು ಪರಿಶೀಲಿಸಿ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಮಾಲು ಶ್ರೀಗಂಧವೇ ಎಂದು ದೃಢೀಕರಿಸಿ ಪ್ರಮಾಣ ಪತ್ರ ಸಲ್ಲಿಸಿರುತ್ತಾರೆ. ಆದುದರಿಂದ ಅಮಾನತ್ತು ಪಡಿಸಿಕೊಂಡ ಮಹೇಂದ್ರ ಮಾರ್ಷಲ್ ಜೀಪ್ ಸಂಖ್ಯೆ: ಎಂಎಚ್-10-ಸಿ-4718 ರಲ್ಲಿ ಇದ್ದ ಮಾಲು ಶ್ರೀಗಂಧವೇ ಆಗಿರುತ್ತದೆ ಎಂಬುದು ದೃಢಪಟ್ಟಿರುತ್ತದೆ.

**ಅಂಶ-3:**

ಈ ಪ್ರಕರಣದಲ್ಲಿ ಮಹೇಂದ್ರ ಮಾರ್ಶಲ್ ಜೀಪ್ ಸಂಖ್ಯೆ: ಎಂಎಚ್-10-ಸಿ-4718ರ ಮಾಲೀಕರಾದ ಶ್ರೀ ಬಾಬಾ ಸಾಬ್ ಯಶವಂತ ರಾವ್ ಪಾಟೀಲ್ ರವರ ಪವರ್ ಆಫ್ ಆಟಾರ್ನಿ ಹೋಲ್ಡರ್, ಶ್ರೀ ಸತ್ಯಜಿತ್ ಬಾಬಾ ಸಾಬ್ ಪಾಟೀಲ್ ಇವರು ವಿಚಾರಣಾ ಸಮಯದಲ್ಲಿ ವಾಹನದ ಮಾಲೀಕರು ವಾಹನವು ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ತೊಡಗದಂತೆ ಯಾವುದೇ ರೀತಿಯ ಮುಂಜಾಗರೂಕತೆ ಕ್ರಮಗಳನ್ನು ತೆಗೆದುಕೊಂಡಿರುವುದು ಕಂಡುಬಂದಿರುವುದಿಲ್ಲ. ಅರ್ಜಿದಾರರು ಸಾಕ್ಷಿಯಲ್ಲಿ ನುಡಿದಿರುವ ಪ್ರಕಾರ 14.4.1999 ರಂದು ಸದರಿ ಜೀಪನ್ನು ಕಾಂಪೌಂಡಿನಲ್ಲಿಟ್ಟು ಗೇಟಿಗೆ ಬೀಗ ಹಾಕಿ ಮಲಗಿಕೊಂಡಿದ್ದು, ಬೆಳಿಗ್ಗೆ ಎದ್ದು ನೋಡಿದಾಗ ಜೀಪು ಕಾಣೆಯಾದ ಬಗ್ಗೆ ಸಾಕ್ಷಿ ನುಡಿದಿರುತ್ತಾರೆ. ಆದರೆ ಶಹವಾಡಿ ಪೊಲೀಸ್ ಠಾಣಾಧಿಕಾರಿಗಳು ತಮ್ಮ ಠಾಣೆ ಗುನ್ನೆ ನಂ.20/99 ರಲ್ಲಿ ಪ್ರಕರಣ ದಾಖಲಿಸಿಕೊಂಡಿದ್ದು, ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಮಹಜರ್ ಮಾಡಿರುತ್ತಾರೆ. ಮಹಜರ್ ಪ್ರಕಾರ ಮನೆ ಮುಂದೆ ಕಾಂಪೌಂಡ್ ಇದ್ದ ಬಗ್ಗೆ ಯಾಗಲೀ, ಅದಕ್ಕೆ ಗೇಟ್ ಇದ್ದ ಬಗ್ಗೆಯಾಗಲಿ, ಗೇಟ್ ಒಡೆದು ದುಷ್ಕರ್ಮಿಗಳು ಜೀಪನ್ನು ಕಳವು ಮಾಡಿದ ಬಗ್ಗೆ ಯಾವುದೇ ನಿಶಾನೆಯಾಗಲಿ, ಕಾಂಪೌಂಡ್ ಇದ್ದ ಬಗ್ಗೆಯಾಗಲಿ ಮಹಜರ್‌ನಲ್ಲಿ ಕಾಣಿಸಿಲ್ಲ. ಹಾಗಾಗಿ ಸದರಿ ಸಾಕ್ಷಿದಾರರು ಹೇಳಿರುವ ಹೇಳಿಕೆಯು ಸಂಶಯಾಸ್ಪದವಾಗಿರುತ್ತದೆ.

ದಿನಾಂಕ: 15.4.1999ರ ಮುಂಜಾನೆ 3.30 ಕ್ಕೂ ಮೊದಲೇ ವಾಹನವು ಕಳುವಾಗಿರುತ್ತದೆ ಎಂದು ಪಂಚನಾಮೆಯಲ್ಲಿ ನಮೂದಿಸಿರುವುದನ್ನು ಪರಿಗಣಿಸುವುದಾದಲ್ಲಿ ವಾಹನದ ಮಾಲೀಕರು ಕೂಡಲೇ ಈ ಬಗ್ಗೆ ಪೊಲೀಸ್ ಠಾಣೆಯಲ್ಲಿ ಏಕೆ ದೂರನ್ನು ದಾಖಲಿಸಿರುವುದಿಲ್ಲ? ದೂರನ್ನು ದಾಖಲಿಸಲು ಬೆಳಿಗ್ಗೆ 9.25ರ ವರೆಗೆ ಏಕೆ ವಿಳಂಬ ಮಾಡಲಾಯಿತು? ಕೊನೆಯ ಪಕ್ಷ ದೂರವಾಣಿಯ ಮೂಲಕವಾದರೂ ಪೊಲೀಸ್ ಠಾಣೆಗೆ ಏಕೆ ದೂರನ್ನು ನೀಡಿರುವುದಿಲ್ಲ? ಎಂಬ ಪ್ರಶ್ನೆಗಳು ಉದ್ಭವಿಸುತ್ತವೆ. ದಿನಾಂಕ: 15.4.1999ರ ಪಂಚನಾಮೆಯನ್ನು ಅವಲೋಕಿಸಿದಾಗ ಪಂಚರು ಸದರಿ ವಾಹನವು ಕಳುವಾಯಿತೆನ್ನಲಾದ ಸ್ಥಳದ ವಿವರಣೆಯನ್ನು ನೀಡಿರುತ್ತಾರೆಯೇ ವಿನಃ ಸದರಿ ವಾಹನವು ನಿಜವಾಗಿಯೂ ಕಳುವಾಗಿರುವ ಬಗ್ಗೆ ಯಾವುದೇ ಪ್ರಸ್ತಾಪ ಮಾಡಿರುವುದಿಲ್ಲ. ವಾಹನದ ಮಾಲೀಕರು ಪಂಚರ ಸಮ್ಮುಖದಲ್ಲಿ ಸದರಿ ವಾಹನವನ್ನು ದಿನಾಂಕ: 15.4.1999ರ ಮುಂಜಾನೆ 3.30ಕ್ಕಿಂತ ಮೊದಲೇ ಅಪರಿಚಿತ ವ್ಯಕ್ತಿಗಳು ವಾಹನವನ್ನು ಕಳವು ಮಾಡಿಕೊಂಡು ಹೋಗಿರುತ್ತಾರೆ ಎಂಬುದಾಗಿ ತಿಳಿಸಿರುತ್ತಾರೆ. ಆದರೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿನೀಡುವ ಸಮಯದಲ್ಲಿ ದಿನಾಂಕ: 15.4.1999ರ ಬೆಳಿಗ್ಗೆ 6.00 ಗಂಟೆಯ ಸಮಯದಲ್ಲಿ ಎದ್ದು ನೋಡಲಾಗಿ ತಮ್ಮ ವಾಹನವು ಕಳುವಾಗಿರುವ ವಿಚಾರವು ತಮ್ಮ ಗಮನಕ್ಕೆ ಬಂದಿರುವುದಾಗಿ ಹೇಳಿಕೆ ನೀಡಿರುತ್ತಾರೆ. ಇವರ ಹೇಳಿಕೆಗಳು ಒಂದಕ್ಕೊಂದು ತಾಳೆ ಹೊಂದುವುದಿಲ್ಲ. ಇದು ಅನುಮಾನಕ್ಕೆ ಆಸ್ಪದ ನೀಡುತ್ತದೆ. ಇದರಿಂದ ವಾಹನವು ನಿಜವಾಗಿಯೂ ಕಳುವಾಗಿತ್ತೇ? ಎಂಬ ಬಗ್ಗೆ ಶಂಕೆ ಉಂಟಾಗುತ್ತದೆ.

ಭಾರತೀಯ ದಂಡ ಸಂಹಿತೆ ಸೆಕ್ಷನ್ 101 ಮತ್ತು 106 ರನ್ವಯ ಮತ್ತು ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್-71 (ಬಿ) (2) ರನ್ವಯ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರಿಗೆ ವಾಹನವು ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿಲ್ಲ ಎಂಬುದನ್ನು ಸಾಬೀತುಪಡಿಸುವ ಜವಾಬ್ದಾರಿಯು ಇರುತ್ತದೆ. ಪ್ರಕರಣಕ್ಕೆ ಸಂಬಂಧಿಸಿದ ಸಾಕ್ಷ್ಯಾಧಾರಗಳನ್ನು ಮತ್ತು ವಾದ ವಿವಾದಗಳನ್ನು ಪರಿಗಣಿಸಿದಾಗ ವಾಹನದ ಮಾಲೀಕರು ವಾಹನವು ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ದುರ್ಬಳಕೆಯಾಗದಂತೆ ಸಮರ್ಪಕವಾದ ಮುಂಜಾಗರೂಕತೆ ಕ್ರಮ ತೆಗೆದುಕೊಂಡಿಲ್ಲದಿರುವುದು ದೃಢಪಟ್ಟಿರುತ್ತದೆ.

ಆದ್ದರಿಂದ ಅಂಶ-3 ನಕಾರಾತ್ಮಕ ಎಂದು ಸಮರ್ಥಿಸಿದೆ.

ಸರ್ಕಾರದ ಸಹಾಯಕ ಅಭಿಯೋಜಕ ನಿರ್ದೇಶಕರ ಮತ್ತು ಅರ್ಜಿದಾರರ ಪರ ವಕೀಲರ ವಾದ-ವಿವಾದಗಳನ್ನು ಆಲಿಸಿದ ನಂತರ ಈ ಕೆಳಗಿನಂತೆ ಆದೇಶ ನೀಡಿದೆ.

**ಆದೇಶ**

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಜಿ.ಎಸ್. ಕರಿಯಪ್ಪ, ಭಾಅಸೇ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್-71(ಎ) ಪ್ರಕಾರ ಪ್ರಸ್ತುತ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ವಾಹನ ಮಹೇಂದ್ರ ಮಾರ್ಶಲ್ ಜೀಪ್ ಸಂಖ್ಯೆ: ಎಂಎಚ್-10-ಸಿ-4718 ಇಂಜಿನ್ ಸಂಖ್ಯೆ: ಡಿಡಬ್ಲ್ಯೂ-121689, ಛಾಸ್ಸಿ ಸಂಖ್ಯೆ: ಸಿಎಲ್-550ಎಂಡಿ-2ಎಲ್‌ಡಬ್ಲ್ಯೂ-ಡಿಡಬ್ಲ್ಯೂ-121689 ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ 230 ಕೆಜಿ ಶ್ರೀಗಂಧವನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಸದರಿ ವಾಹನ ಮತ್ತು ಶ್ರೀಗಂಧವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿದೆ ಎಂದು ಘೋಷಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 18.10.2004 ರಂದು ತೆರೆದ ನ್ಯಾಯಾಲಯದಲ್ಲಿ ನೀಡಲಾಗಿದೆ. ಈ ಆದೇಶವನ್ನು ಹೊರಡಿಸಿದ 30 ದಿನಗಳ ಒಳಗಾಗಿ ಯಾವುದೇ ಅಹವಾಲು ಸ್ವೀಕೃತವಾಗದಿದ್ದಲ್ಲಿ ಈ ಆದೇಶವೇ ಅಂತಿಮ ಆದೇಶವಾಗಿರುತ್ತದೆ.

ಪಿ.ಆರ್. 1502 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

**ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**
**ಡಿ.ಟಿ.ಸಿ.ಆರ್. ಸಂಖ್ಯೆ: 359/2003-2004, ದಿನಾಂಕ: 5ನೇ ಅಕ್ಟೋಬರ್ 2004**
**ಚಿಕ್ಕಮಗಳೂರು ಬಸವನಹಳ್ಳಿ ಪೊ.ಠಾ.ಕ್ರೈಂ ಸಂ. 06/2004, ದಿನಾಂಕ: 26.01.2004**
**ಅಬಕಾರಿ ಸಬ್‌ಇನ್ಸ್‌ಪೆಕ್ಟರ್, ಚಿಕ್ಕಮಗಳೂರು ಉಪ ವಲಯ ಇವರ ಪ್ರವವ ಸಂ.49/2003-04, ದಿನಾಂಕ: 18.06.2004**

**ಉಪಸ್ಥಿತರು:** ಶ್ರೀ ಕೆ. ಭೀಮಪ್ಪ, ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಫಿರ್ಯಾದಿದಾರರು:** ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಚಿಕ್ಕಮಗಳೂರು ಬಸವನಹಳ್ಳಿ ಪೊಲೀಸ್ ಠಾಣೆ.

**ಆಪಾದಿತರು:** ಆರ್.ಸಿ. ಶಂಕರೇಗೌಡ ಬಿನ್ ಚಿಕ್ಕೇಗೌಡ ಮತ್ತು ಇತರರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 26.01.2004 ರಂದು ಆರಕ್ಷಕ ಉಪ ನಿರೀಕ್ಷಕರು, ಚಿಕ್ಕಮಗಳೂರು ಬಸವನಹಳ್ಳಿ ಪೊಲೀಸ್ ಠಾಣೆ ಇವರು ಸಿಬ್ಬಂದಿಗಳು ಮತ್ತು ಮೇಲಾಧಿಕಾರಿಗಳೊಂದಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಚಿಕ್ಕಮಗಳೂರು ನಗರದ ಗೌರಿ ಕಾಲುವೆಯ ಚರ್ಚ್ ರಸ್ತೆಯಲ್ಲಿರುವ ಪುಟ್ಟಸ್ವಾಮಿ ಗೌಡರ ಮನೆಯಲ್ಲಿ ಬಾಡಿಗೆ ಇರುವ ಶ್ರೀಮತಿ ಪ್ರೇಮ ಕೋಂ ಲೇಟ್ ಕೃಷ್ಣಮೂರ್ತಿ ಇವರ ಮನೆಯಲ್ಲಿ ದಾಳಿ ನಡೆಸಿದಾಗ ಶ್ರೀ ಆರ್.ಸಿ. ಶಂಕರೇಗೌಡ ಬಿನ್ ಚಿಕ್ಕೇಗೌಡ, ಸಿ.ಎಲ್. ಯೋಗರಾಜು ಬಿನ್ ಲಕ್ಕೇಗೌಡ ಮತ್ತು ಸಿ.ವಿ. ಆನಂದ ಬಿನ್ ವೇಲಾಯುಧನ್ ಇವರುಗಳನ್ನು ಹಿಡಿದು ಪರಿಶೀಲಿಸಿದಾಗ ನಕಲಿ ಮದ್ಯ ತಯಾರಿಸುತ್ತಿದ್ದು ಒಟ್ಟು 8 ರೆಟ್ಟಿನ ಪೆಟ್ಟಿಗೆಗಳಲ್ಲಿ ವಿವಿಧ ಬಗೆಯ ನಕಲಿ ಮದ್ಯ 66.780 ಲೀಟರ್ ಹಾಗೂ ನಕಲಿ ಮದ್ಯ ತಯಾರಿಸುವ ಸಾಮಾಗ್ರಿಗಳೊಂದಿಗೆ ಒಂದು ಬಜಾಜ್ ಸ್ಕೂಟರ್ ವಾಹನ ಸಂಖ್ಯೆ: ಸಿಟಿಎಕ್ಸ್ 943 ಮತ್ತು ನಗದು ಹಣ ರೂ.1,250/- ಗಳನ್ನು ವಶಪಡಿಸಿಕೊಂಡು, ಸದರಿ ಆರೋಪಗಳು ಯಾವುದೇ ಪರವಾನಗಿ ಇಲ್ಲದೇ ನಕಲಿ ಮದ್ಯವನ್ನು ತಯಾರಿಸಿ ಬಾಟಲಿಗಳನ್ನು ತುಂಬಿಸಿ, ನಕಲಿ ಲೇಬಲ್‌ಗಳನ್ನು ಸೃಷ್ಟಿಸಿ ಬಾಟಲಿಗಳ ಮೇಲೆ ಅಂಟಿಸಿ ಮಾರಾಟ ಮಾಡಿ ಮೋಸ ಮಾಡುತ್ತಿದ್ದರಿಂದ, ಸದರಿಯವರ ವಿರುದ್ಧ ಕ್ರಮ ಕೈಗೊಂಡು ಠಾಣೆಯ ಕ್ರೈಂ ಸಂಖ್ಯೆ:6/2004 ರಲ್ಲಿ ಮೊಕದ್ದಮೆ ದಾಖಲು ಮಾಡಿ ನ್ಯಾಯಾಲಯಕ್ಕೆ ನಿವೇದಿಸಿಕೊಳ್ಳಲಾಯಿತು. ನಂತರ ಸದರಿ ಮಾಲುಗಳನ್ನು ಠಾಣೆಯ ಪಿಎಫ್ ನಂ: 9/2004 ರಲ್ಲಿ ನಮೂದಿಸಲಾಯಿತು. ಸದರಿ ಆರೋಪಿಗಳನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ ಒಂದನೇಯ ಆರೋಪಿಯನ್ನು ಪೊಲೀಸ್‌ರವರ ವಶಕ್ಕೆ ತೆಗೆದುಕೊಂಡು ಈತನನ್ನು ಶಿವಮೊಗ್ಗಕ್ಕೆ ಕರೆದುಕೊಂಡು ಹೋಗಿ ಅಲ್ಲಿನ ಆರೋಪಿಗಳಾದ ರಾಜು, ರಹಮಾತುಲ್ಲಾ ಮತ್ತು ಗೋವಿಂದರಾಜುರವರನ್ನು ದಸ್ತಗಿರಿ ಮಾಡಿ, ಇವರುಗಳಿಂದ ವಾಹನ ಸಂಖ್ಯೆ: ಕೆಎ-14-ಕ್ಯೂ-050 ಮತ್ತು ಕೆಎ-14-ಕ್ಯೂ-2070, ಸೂಜುಕಿ ಮೋಟಾರ್ ಬೈಕ್‌ಗಳು, 2 ಮೊಬೈಲ್ ಫೋನ್‌ಗಳು, ಮದ್ಯದ ಲೇಬಲ್‌ಗಳು, ಖಾಲಿ ಸಾರಾಯಿ ಪ್ಯಾಕೆಟ್‌ಗಳಿರುವ 2 ಕಟ್ಟುಗಳು, 100 ಮಿಲಿಯ 18 ಸಾರಾಯಿ ಪ್ಯಾಕೆಟ್‌ಗಳು ಮತ್ತು ಸಾರಾಯಿ ಪ್ಯಾಕೆಟ್‌ಗಳನ್ನು ಪಂಚ್ ಮಾಡುವ ಒಂದು ಪಂಚಿಂಗ್ ಮಿಷಿನ್‌ಅನ್ನು ವಶ ಪಡಿಸಿಕೊಂಡು ಠಾಣೆಗೆ ಬಂದು ಪಿಎಫ್. ನಂ: 10,11/2004 ರಲ್ಲಿ ನಮೂದಿಸಿದ್ದು ಮತ್ತು ಚಿಕ್ಕಮಗಳೂರಿನ ವಲ್ಲಭ ಗಣಪತಿ ದೇವಾಲಯದ ಹತ್ತಿರ ಒಂದನೇ ಆರೋಪಿಯು ತೋರಿಸಿದ ಒಂದು ಮಾರುತಿ ಕಾರ್ ಸಂಖ್ಯೆ: ಕೆಎ-25-ಎಂ-11 ಹಾಗೂ ಕಾರ್‌ನಲ್ಲಿದ್ದ ಬಿಳಿ ಪ್ಲಾಸ್ಟಿಕ್ ಕ್ಯಾನಿನಲ್ಲಿ 5 ಲೀಟರ್ ಸ್ಪಿರಿಟ್ ಮತ್ತು ಇನ್ನಿತರೆ ವಸ್ತುಗಳನ್ನು ವಶಪಡಿಸಿಕೊಂಡು ಪಿಎಫ್. ನಂ:12/2004 ರಲ್ಲಿ ನಮೂದಿಸಿದ್ದು, ನಗದು ಹಣ, ವಾಹನಗಳು ಮತ್ತು ಸಾರಾಯಿ ಪ್ಯಾಕೆಟ್‌ಸೀಲು ಮಾಡುವ ಪಂಚಿಂಗ್ ಮಿಷಿನ್ ಹೊರತುಪಡಿಸಿ ಇನ್ನುಳಿದ ವಸ್ತುಗಳಲ್ಲಿ ಪ್ರತ್ಯೇಕವಾಗಿ ರಾಸಾಯನಿಕ ಪರೀಕ್ಷೆಗಾಗಿ ಮಾದರಿಗಳನ್ನು ತೆಗೆದು ಸಂಬಂಧಪಟ್ಟ ಕಡತದೊಂದಿಗೆ ಮುಂದಿನ ಕ್ರಮಕ್ಕಾಗಿ ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರಿಗೆ ಹಸ್ತಾಂತರಿಸಿದ ಮೇರೆಗೆ, ಸದರಿಯವರು ತನಿಖೆ ಮುಂದುವರೆಸಿ ಪ್ರ.ವ.ವ. ಸಂಖ್ಯೆ: 49/2003-04, ದಿನಾಂಕ: 18.06.2004 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ನ್ಯಾಯಾಲಯಕ್ಕೆ ಮತ್ತು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನಗಳು ಹಾಗೂ ನಕಲಿ ಮದ್ಯ ಮತ್ತು ಇನ್ನಿತರೆ ವಸ್ತುಗಳಿಗೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ, ಪತ್ರಗಳನ್ನು ಬರೆದು ಮುಟ್ಟುಗೋಲಿನ ನಡುವಳಿಗಳನ್ನು ಮುಂದುವರೆಸಲಾಯಿತು.

ವಾಹನ ಸಂಖ್ಯೆ: ಸಿಟಿಎಕ್ಸ್-943ರ ಬಜಾಜ್ ಸ್ಕೂಟರ್‌ಗೆ ಸಂಬಂಧಿಸಿದಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಇವರಿಂದ ಪಡೆಯಲಾದ ವಾಹನದ "ಬಿ" ಎಕ್ಸ್‌ಟ್ರಾಕ್ಟ್ ಆಧಾರದ ಮೇಲೆ ವಾಹನದ ಮಾಲೀಕರಾದ ಸಿ.ವಿ. ಜಯಪ್ರಕಾಶ್ ಬಿನ್ ವೆಂಕಟೇಶ ನಾಯ್ಡು, ಆಂಜನೇಯ ಬೀದಿ, ಚಿಕ್ಕಮಗಳೂರು ಇವರು ವಾಹನದ ಮಾಲೀಕರೆಂದು ತಿಳಿದು ಬಂದಿದ್ದು, ಸದರಿಯವರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಅಡಿಯಲ್ಲಿ ನೋಟೀಸ್ ಅನ್ನು ಅಬಕಾರಿ ಉಪ ನಿರೀಕ್ಷಕರು ಚಿಕ್ಕಮಗಳೂರು ಉಪ ವಲಯ ಇವರು ಖುದ್ದು ಜಾರಿಗೊಳಿಸಲು ಹಾಗೂ ನೋಂದಾಯಿತ ಅಂಚೆ ಮೂಲಕ ರವಾನಿಸಲು ಕ್ರಮ ಕೈಗೊಂಡಿದ್ದು, ದಿನಾಂಕ: 31.07.2004 ರಂದು ನೋಟೀಸ್ "ಇನ್‌ಡೋರ್" ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಸದರಿ ವಾಹನದ ಮಾಲೀಕರಿಗೆ ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರು ದಿನಾಂಕ: 06.08.2004 ರಂದು ನೋಟೀಸ್ ಖುದ್ದು ಜಾರಿಗೊಳಿಸಿ ಸ್ವೀಕೃತಿಯನ್ನು ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ, ವಾಹನ ಮಾಲೀಕರಿಗೆ ನೋಟೀಸ್ ಜಾರಿಯಾಗಿದ್ದರು, ಈವರೆವಿಗೂ ಸಹಾ ಪ್ರಾಧಿಕಾರದ ಮುಂದೆ ಬಂದು ಹಕ್ಕು ಸಾಧಿಸಿರುವುದಿಲ್ಲ. ಈ ಬಗ್ಗೆ ವಾಹನ ಮಾಲೀಕರಿಗೆ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಗಿರುತ್ತದೆ. ವಶಪಡಿಸಿಕೊಂಡ ವಾಹನದ ಮುಟ್ಟುಗೋಲಿನ ನಡುವಳಿಗಳು ಪೂರ್ಣಗೊಂಡಿದ್ದು, ಜಪ್ತಾಗಿರುವ ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 43(ಸಿ) ಅಡಿಯಲ್ಲಿ ವಶಪಡಿಸಿಕೊಂಡ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಶ್ರೀ ಕೆ. ಭೀಮಪ್ಪ ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ), ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನಗಳ ಪೈಕಿ, ವಾಹನ ಸಂಖ್ಯೆ: ಸಿಟಿಎಕ್ಸ್ 943 (ಬಜಾಜ್ ಸ್ಕೂಟರ್) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು

ಆದೇಶಿಸಿರುತ್ತೇನೆ. ಉಳಿದ ಮೂರು ವಾಹನಗಳಾದ ಕೆಎ-14-ಕ್ಯೂ-050 ಮತ್ತು ಕೆಎ-14-ಕ್ಯೂ-2070 (ಸೂಜುಕಿ ಮೋಟಾರ್ ಬೈಕ್‌ಗಳು) ಹಾಗೂ ಕೆಎ-25-ಎಂ-11 (ಮಾರುತಿ ಕಾರ್) ಗಳಿಗೆ ಸಂಬಂಧಿಸಿದ ಮುಟ್ಟುಗೋಲು ನಡವಳಿಗಳನ್ನು ಪ್ರಾಧಿಕಾರದಲ್ಲಿ ಮುಂದುವರೆದಿದೆ.

ಈ ಆದೇಶವನ್ನು ಇಂದು ಅಂದರೆ 5ನೇ ಅಕ್ಟೋಬರ್ 2004 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಗಿತ್ತು.

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ಪಿ.ಆರ್.1503 ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಜಂಟಿ ಕೃಷಿ ನಿರ್ದೇಶಕರ ಕಛೇರಿ, ಹಾಸನ ಜಿಲ್ಲೆ, ಹಾಸನ**

ಅಧಿಕಾರಿಗಳು ಮತ್ತು ನೌಕರರು ಅವರಿಗೆ ವಹಿಸಲಾಗಿರುವ ಅಧಿಕಾರಗಳು ಮತ್ತು ಕರ್ತವ್ಯಗಳು : ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ.

4 ಸೆಕ್ಷನ್ 3(ಬಿ) ಅಡಿಯಲ್ಲಿ ನಮೂದಿಸಿರುವ ಅಧಿಕಾರಿ; ಸಿಬ್ಬಂದಿ ವರ್ಗ (ಗ್ರೂಪ್ ಸಿ ಮತ್ತು ಡಿ) ಜಂಟಿ ಕೃಷಿ ನಿರ್ದೇಶಕರ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ಈ ಕಛೇರಿಯಲ್ಲಿ ನಿರ್ವಹಿಸುವ ಎಲ್ಲ ಶಾಖೆಗಳ ವಿಷಯಗಳಲ್ಲಿ ಅಂತಿಮ ತೀರ್ಮಾನ ಕೈಗೊಳ್ಳುವ ಪ್ರಾಧಿಕಾರವಾಗಿರುತ್ತದೆ.

ಸಾರ್ವಜನಿಕರಿಂದ, ಅಧೀನ ಕಛೇರಿಗಳಿಂದ ಮತ್ತು ಸರ್ಕಾರ ಹಾಗೂ ಮೇಲಾಧಿಕಾರಿಗಳಿಂದ ಬರುವಂತಹ ಎಲ್ಲ ಕಾಗದ ಪತ್ರಗಳನ್ನು ಆಯಾ ಶಾಖೆಗೆ ಸಂಬಂಧಪಟ್ಟಂತೆ ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಕಛೇರಿ ಸಹಾಯಕರು, ಅಧೀಕ್ಷಕರು, ಆಡಳಿತ ಸಹಾಯಕರು, ಆಡಳಿತಾಧಿಕಾರಿಗಳು, ಕೇಂದ್ರಸ್ಥಾನ ಸಹಾಯಕರು ಸಹಿ ಮಾಡಿದ ನಂತರ ಸ್ವೀಕೃತಿ ಶಾಖೆಯ ಸಂಬಂಧಿಸಿದ ವಹಿಯಲ್ಲಿ ನಮೂದಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ನೀಡಲಾಗುತ್ತಿದೆ.

ಕಛೇರಿ ಕೈಪಿಡಿ ನಿಯಮಾವಳಿ ರೀತ್ಯ ತುರ್ತು ಕಾಗದ ಪತ್ರಗಳನ್ನು ಆದ್ಯತೆ ಮೇಲೆ ಕಛೇರಿ ಟಿಪ್ಪಣಿಯೊಂದಿಗೆ ಕಡತದಲ್ಲಿ ಮಂಡಿಸಲಾಗುವುದು. ಎಲ್ಲಾ ವಿಷಯ ನಿರ್ವಾಹಕರು ಸ್ವೀಕೃತವಾದ ಪತ್ರಗಳನ್ನು ಅವರವರ ದಿನವಹಿಯಲ್ಲಿ ನಮೂದಿಸಿಕೊಂಡು ತದನಂತರ ಆದ್ಯತೆ ಮೇರೆಗೆ ಸಂಬಂಧಪಟ್ಟ ಕಡತದಲ್ಲಿ ಟಿಪ್ಪಣಿ ಹಾಕಿ ಮಂಡಿಸುತ್ತಾರೆ. ವಿಷಯ ನಿರ್ವಾಹಕರು 5 ಬಂಡಲ್ ವಿಧಾನ ಅಳವಡಿಸಿ ಕಾರ್ಯನಿರ್ವಹಿಸುತ್ತಿರುತ್ತಾರೆ. ವಿಷಯ ನಿರ್ವಾಹಕರಿಂದ ಬಂದಂತಹ ಕಡತವನ್ನು ಅಧೀಕ್ಷಕರು ಪರಿಶೀಲಿಸಿ ಅವರ ಸೂಕ್ತ ಅಭಿಪ್ರಾಯದೊಂದಿಗೆ ಆಡಳಿತ ಸಹಾಯಕರು, ಆಡಳಿತಾಧಿಕಾರಿಗಳು ಕೇಂದ್ರಸ್ಥಾನ ಸಹಾಯಕರುಗಳ ಮೂಲಕ ಕಡತಗಳನ್ನು ವಿಲೆಗೆ ಕ್ರಮ ವಹಿಸಲಾಗುತ್ತಿದೆ.

ಜಂಟಿ ಕೃಷಿ ನಿರ್ದೇಶಕರು ಕಡತಗಳನ್ನು ವಿಲೇವಾರಿ ಮಾಡಿ ಪಾಲಿಸಿ ಹಾಗೂ ಇತರೆ ವಿಷಯಗಳಲ್ಲಿ ಅಂತಿಮ ತೀರ್ಮಾನ ಮಂಜೂರಾತಿ ಪ್ರಕರಣಗಳನ್ನು ಸರ್ಕಾರಕ್ಕೆ ಹಾಗೂ ಮೇಲಾಧಿಕಾರಿಗಳ ಕಛೇರಿಗೆ ಸಲ್ಲಿಸುವಂತಹ ಪ್ರಕರಣಗಳಲ್ಲಿ ಜಂಟಿ ಕೃಷಿ ನಿರ್ದೇಶಕರ ಅಂತಿಮ ತೀರ್ಮಾನಕ್ಕಾಗಿ ವಿಭಾಗದ ಮುಖ್ಯಸ್ಥರು ನಿಯಮಾನುಸಾರ ಟಿಪ್ಪಣಿಯಲ್ಲಿ ಶಿಫಾರಸ್ಸು ಮಾಡಿ ಅಧಿಕಾರಿಗಳಿಗೆ ಸಲ್ಲಿಸುತ್ತಾರೆ.

**ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000**

**ನಮೂನೆ-1**

**ಸೆಕ್ಷನ್ 3ರ ಅಡಿಯಲ್ಲಿ ಸಾರ್ವಜನಿಕ ಪ್ರಾಧಿಕಾರಿಗಳು ಸ್ವಯಂ ನಿರ್ವಹಿಸಬೇಕಾದ ಕರ್ತವ್ಯಗಳ ಅನುಷ್ಠಾನವನ್ನು ಸೂಚಿಸುವ ಪ್ರಪತ್ರ**

| | |
|---|---|
| 1. ಇಲಾಖೆಯ ಹೆಸರು | ಜಂಟಿ ಕೃಷಿ ನಿರ್ದೇಶಕರ ಕಛೇರಿ, ಹಾಸನ |
| 2. ಸಾರ್ವಜನಿಕ ಪ್ರಾಧಿಕಾರಿಗಳ ಸಂಖ್ಯೆ ಸೆಷನ್-2ಸಿ(1) ಮತ್ತು 2ಸಿ (11) ಅಡಿಯಲ್ಲಿ ವಿವರಗಳು | 1. ಉಪ ಕೃಷಿ ನಿರ್ದೇಶಕರು, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಅರಕಲಗೂಡು.<br>2. ಸಹಾಯಕ ಕೃಷಿ ನಿರ್ದೇಶಕರುಗಳು, 8 ತಾಲ್ಲೂಕುಗಳು.<br>3. ಕೃಷಿ ಅಧಿಕಾರಿ, ಕೃಷಿ ಪಾಠ ಶಾಲೆ, ಅರಕಲಗೂಡು.<br>4. ಕೃಷಿ ಅಧಿಕಾರಿ, ಮಣ್ಣು ಆರೋಗ್ಯ ಕೇಂದ್ರ, ಹಾಸನ. |
| ಎಲ್ಲಾ ದಾಖಲೆಗಳನ್ನು ಅದರ ನಿರ್ವಹಣೆಯನ್ನು ಅಗತ್ಯತೆಗಳಿಗೆ ಸುಸಂಗತವಾದ ರೀತಿಯಲ್ಲಿ ಮತ್ತು ನಮೂನೆಯಲ್ಲಿ ಕ್ರಮಬದ್ಧ ಸೂಚಿಪಟ್ಟಿ ಮತ್ತು ಸೂಚಿಗಳೊಂದಿಗೆ ಇಡಲಾಗಿದೆಯೆ. | ಜಂಟಿ ಕೃಷಿ ನಿರ್ದೇಶಕರ ಕಛೇರಿಯಲ್ಲಿ ಈ ಕೆಳಕಂಡ ಎಲ್ಲಾ ವಿಧವಾದ ಪ್ರಕಾರ್ಯಗಳ ಬಗ್ಗೆ ದಾಖಲಾತಿಗಳನ್ನು ಅದರ ನಿರ್ವಹಣೆಯ ಅಗತ್ಯಗಳಿಗೆ ತಕ್ಕಂತೆ ನಿರ್ವಹಿಸಲಾಗುತ್ತಿದೆ. |
| | ಜಂಟಿ ಕೃಷಿ ನಿರ್ದೇಶಕರ ಕಛೇರಿ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಕಛೇರಿಗಳ ಯೋಜನೆಗಳು:<br>1. ಉಪ ಕೃಷಿ ನಿರ್ದೇಶಕರ ಕಛೇರಿ, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಅರಕಲಗೂಡು.<br>2. ಎಂಟು ತಾಲ್ಲೂಕು ಸಹಾಯಕ ಕೃಷಿ ನಿರ್ದೇಶಕರುಗಳು.<br>3. ಕೃಷಿ ಅಧಿಕಾರಿಗಳ ಕಛೇರಿ.<br>4. ಕೃಷಿ ಪಾಠಶಾಲೆ, ಅರಕಲಗೂಡು.<br>5. ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಹಾಸನ. |
| ಜಂಟಿ ಕೃಷಿ ನಿರ್ದೇಶಕರ ಕಛೇರಿಯ ಯೋಜನೆಗಳು: | 1. ಜಿಲ್ಲೆಯ ಅಂಕಿ ಅಂಶಗಳು<br>2. ಜಿಲ್ಲೆಯ ವಾಡಿಕೆ ಮಳೆ ವಿವರ<br>3. 2003ರ ಮುಂಗಾರಿನ ಕೃಷಿ ಉತ್ಪಾದನ ಕಾರ್ಯಕ್ರಮ<br>4. ಬಿತ್ತನೆ ಬೀಜದ ಬೇಡಿಕೆ<br>5. ರಸಗೊಬ್ಬರ ಬಳಕೆ ಗುರಿ ಜಿಲ್ಲಾ ವಲಯ ಯೋಜನೆಗಳು<br>6. ಕೃಷಿ ಪಾಠಶಾಲೆಯ ಅಭಿವೃದ್ಧಿ ಕಾರ್ಯಗಳು<br>7. ಕಬ್ಬು ಅಭಿವೃದ್ಧಿ<br>8. ಬೆಳೆ ವಿಮಾ ಯೋಜನೆ - ಸಾಧನ ಸಾಮಗ್ರಿಗಳು |

| | |
|---|---|
| | 9. ಇಲಾಖಾ ಕಟ್ಟಡಗಳು |
| | 10. ಸಸ್ಯ ಸಂರಕ್ಷಣಾ ಯೋಜನೆ |
| | 11. ಹಸಿರೆಲೆ ಮತ್ತು ಜೈವಿಕಗೊಬ್ಬರ |
| | 12. ಕೃಷಿ ಮೇಳ ಮತ್ತು ವಸ್ತುಪ್ರದರ್ಶನ |
| | 13. ವಿಶೇಷ ಘಟಕ ಯೋಜನೆ |
| | 14. ಗಿರಿಜನ ಉಪಯೋಜನೆ |
| | **ರಾಜ್ಯವಲಯ ಯೋಜನೆಗಳು:** |
| | 15. ಕೃಷಿ ನಿರ್ದೇಶನಾಲಯ - ಕಛೇರಿ ಬಾಡಿಗೆ |
| | 16. ರೈತ ಮಿತ್ರ ಯೋಜನೆ - ರೈತ ಸಂಪರ್ಕ ಕೇಂದ್ರಗಳು |
| | 17. ಸಸ್ಯ ಸಂರಕ್ಷಣಾ ಯೋಜನೆ |
| | 18. ಕುಯಿಲು ತಂತ್ರಜ್ಞಾನ |
| | 19. ಜೈವಿಕ ಗೊಬ್ಬರ ಜನಪ್ರಿಯಗೊಳಿಸುವ ಯೋಜನೆ |
| | 20. ವೈಟಪ್ ಕಾರ್ಯಕ್ರಮ |
| | 21. ಜಿಲ್ಲಾ ಕೃಷಿ ತರಬೇತಿ ಕೇಂದ್ರ |
| | 22. ಪ್ರಕೃತಿ ವಿಕೋಪ ನಿಧಿಯಡಿಯಲ್ಲಿ ರಿಯಾಯಿತಿ ಬೀಜ ವಿತರಣೆ |
| | 23. ಸಮಿತಿ ಮತ್ತು ಸಮಾಲೋಚನೆಗಳು |
| | 24. ವರ್ಕ್ ಪ್ಲಾನ್ - ಗುಣ ನಿಯಂತ್ರಣ |
| | 25. ವರ್ಕ್ ಪ್ಲಾನ್ - ಐ ಪಿ ಎಂ |
| | 26. ವರ್ಕ್ ಪ್ಲಾನ್ - ಬೆಳೆ ಪದ್ಧತಿ ಪ್ರಾತ್ಯಕ್ಷಿಕೆ |
| | 27. ವರ್ಕ್ ಪ್ಲಾನ್ - ಕಬ್ಬು ಅಭಿವೃದ್ಧಿ |
| | 28. ವರ್ಕ್ ಪ್ಲಾನ್ - ಕೃಷಿ ಯಾಂತ್ರೀಕರಣ |
| | 29. ವರ್ಕ್ ಪ್ಲಾನ್ - ಐ.ಎನ್.ಎಂ. |
| | 30. ವರ್ಕ್ ಪ್ಲಾನ್ - ಬೀಜ ವಿತರಣೆ |
| | 31. ಕೃಷಿ ಪಾಠಶಾಲೆಯ ಬೆಳೆ ಕಾರ್ಯಕ್ರಮ |
| | 32. ಸಾವಯವ ಗೊಬ್ಬರ ಸಂಪನ್ಮೂಲ ಅಭಿವೃದ್ಧಿ |
| | 33. ಮಣ್ಣು ಮಾದರಿ ಸಂಗ್ರಹಣೆ |
| | 34. ಕೃಷಿ ವಿಸ್ತರಣೆ ಕಾರ್ಯಕ್ರಮ |
| | 35. ಕೃಷಿ ವಾರ್ತೆ |
| | 36. ಕ್ಷೇತ್ರ ಪ್ರಯೋಗಗಳು |
| | 37. ರೈತ ಸಂಪರ್ಕ ಕೇಂದ್ರಗಳ ದೂರವಾಣಿ ಸಂಖ್ಯೆ |
| | 38. ಹೈಬ್ರಿಡ್ ಭತ್ತ ಬೆಳೆ ಜನಪ್ರಿಯಗೊಳಿಸುವ ಯೋಜನೆ |
| | 39. ವರ್ಕ್ ಪ್ಲಾನ್ - ರೈತ ಸಂಪರ್ಕ ಕೇಂದ್ರಗಳು |
| | 40. ಬಲವರ್ಧನೆ |
| | 41. ಎಣ್ಣೆಕಾಳು ಉತ್ಪಾದನಾ ಯೋಜನೆ |
| | 42. ರಾಷ್ಟ್ರೀಯ ದ್ವಿದಳ ಧಾನ್ಯ ಅಭಿವೃದ್ಧಿ ಯೋಜನೆ |
| | 43. ಕಿರುಚೀಲ ಪ್ರಾತ್ಯಕ್ಷತೆ ಕಾರ್ಯಕ್ರಮ |
| | 44. ಜೈವಿಕ ಗೊಬ್ಬರಬಳಕೆ ಪ್ರಾತ್ಯಕ್ಷತೆ ಕಾರ್ಯಕ್ರಮ |
| | 45. ವರ್ಕ್ ಪ್ಲಾನ್ - ಮಾನವ ಸಂಪನ್ಮೂಲ ಅಭಿವೃದ್ಧಿ |
| | 46. ಬಿತ್ತನೆ ಬೀಜ ಮಾದರಿಗಳ ಸಂಗ್ರಹಣೆ |
| | 47. ರಸಗೊಬ್ಬರ ಮಾದರಿಸಂಗ್ರಹಣೆ |
| | 48. ಕೀಟನಾಶಕ ಮಾದರಿ ಸಂಗ್ರಹಣೆ |
| | 49. ರೈತರ ಆತ್ಮಹತ್ಯೆ ಪ್ರಕರಣಗಳ ಬಗ್ಗೆ |

3. ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ಸಾರ್ವಜನಿಕ ಪ್ರಾಧಿಕಾರ ರೂಪಿಸಿರುವ ಗುಣಮಟ್ಟಗಳು:-

1. ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ 5 ದಿನಗಳೊಳಗಾಗಿ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ.
2. ಸಾರ್ವಜನಿಕರಿಂದ ಸ್ವೀಕರಿಸಲಾಗುವ ಕಾಗದ ಪತ್ರಗಳಿಗೆ ಸ್ವೀಕೃತಿ ನೀಡುವುದಲ್ಲದೆ ಕಾರ್ಯಗತ ಅವಧಿ ನಿಗದಿಪಡಿಸಿ ತಿಳಿಸುವುದು.
3. ವಿಷಯ ನಿರ್ವಾಹಕರು ಕಛೇರಿ ನಿಯಮಾವಳಿ ರೀತ್ಯ ಗರಿಷ್ಠ 5 ದಿನಗಳ ಒಳಗಾಗಿ ಕಾಗದ ಪತ್ರಗಳನ್ನು ಮಂಡಿಸಿರುವುದು.
4. ಸಾರ್ವಜನಿಕ ಕುಂದು ಕೊರತೆಗಳ ಬಗ್ಗೆ ಪ್ರತ್ಯೇಕ ಕೌಂಟರು ತೆರೆದು, ಇಲ್ಲಿ ಸ್ವೀಕರಿಸಲಾಗುವ ಎಲ್ಲ ಮನವಿಗಳನ್ನು ಪ್ರತ್ಯೇಕ ವಹಿಗಳಲ್ಲಿ ನಮೂದಿಸಿ ಕ್ಲುಪ್ತ ಕಾಲದಲ್ಲಿ ಉತ್ತರ ನೀಡುವುದು.
5. ಅಧೀನ ಕಛೇರಿಗಳಿಂದ ವರದಿ ಪಡೆಯಲು ಕಾಲವಧಿ ನಿಗದಿಪಡಿಸುವುದು.
6. ಇಲಾಖೆಯ ಪ್ರಕರಣಗಳ ಪ್ರಗತಿ ಪರಿಶೀಲಿಸಲು ಸಭೆಯನ್ನು ಏರ್ಪಡಿಸುವುದು.

ಜಂಟಿ ಕೃಷಿ ನಿರ್ದೇಶಕರು, ಹಾಸನ ಜಿಲ್ಲೆ, ಹಾಸನ.




ಪಿ.ಆರ್. 1423

ಜಂಟಿ ಕೃಷಿ ನಿರ್ದೇಶಕರು, ಹಾಸನ ಜಿಲ್ಲೆ, ಹಾಸನ.

**ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಅಧಿಸೂಚನೆ ಸಂಖ್ಯೆ: ಕಾಬಾನಿ/ಇತರೆ/ಸಿಆರ್-98/02-03, ದಿನಾಂಕ: 29ನೇ ಅಕ್ಟೋಬರ್ 2004**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ದ ಸೆಕ್ಷನ್–2 (ಎ) ಅಡಿಯಲ್ಲಿ ಸದರಿ ಅಧಿನಿಯಮದ ಉದ್ದೇಶಗಳಿಗೋಸ್ಕರ ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆಯಲ್ಲಿ ಈ ಕೆಳಕಂಡಂತೆ ಸಕ್ಷಮ ಪ್ರಾಧಿಕಾರಗಳನ್ನು ಈ ಮೂಲಕ ಇಲಾಖೆಯು ಘೋಷಿಸಿದೆ.

ಪ್ರತಿ ಸಕ್ಷಮ ಪ್ರಾಧಿಕಾರದ ಎದುರಿಗೆ ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಾವಳಿಗಳು 2002ರ ನಿಯಮ–5 (1)ರಡಿ ಹೇಳಿರುವ ನಿಕಟ ಮೇಲ್ಪಟ್ಟ ಪ್ರಾಧಿಕಾರವನ್ನೂ ಸಹ ಸೂಚಿಸಲಾಗಿದೆ.

| ಕ್ರ. ಸ. | ಸಾರ್ವಜನಿಕ ಪ್ರಾಧಿಕಾರ ಮತ್ತು ಕಛೇರಿಗಳು | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|---|
| | **ಕೇಂದ್ರ ಕಛೇರಿ** | | |
| 1 | ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ನಿರ್ದೇಶಕರು, ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು–1 |
| 2 | ಕಾರ್ಖಾನೆಗಳ ಜಂಟಿ ನಿರ್ದೇಶಕರು–1 ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಜಂಟಿ ನಿರ್ದೇಶಕರು–1 ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ನಿರ್ದೇಶಕರು, ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 |
| 3 | ಕಾರ್ಖಾನೆಗಳ ಜಂಟಿ ನಿರ್ದೇಶಕರು–2 ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಜಂಟಿ ನಿರ್ದೇಶಕರು–2 ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 4 | ಬಾಯ್ಲರುಗಳ ಜಂಟಿ ನಿರ್ದೇಶಕರು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಬಾಯ್ಲರುಗಳ ಜಂಟಿ ನಿರ್ದೇಶಕರು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 5 | ಕಾರ್ಖಾನೆಗಳ ಉಪ ನಿರ್ದೇಶಕರು (ವೈದ್ಯಕೀಯ) ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಉಪ ನಿರ್ದೇಶಕರು (ವೈದ್ಯಕೀಯ) ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 6 | ಔದ್ಯೋಗಿಕ ಆರೋಗ್ಯ ತಜ್ಞರು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಔದ್ಯೋಗಿಕ ಆರೋಗ್ಯ ತಜ್ಞರು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 7 | ಆಡಳಿತಾಧಿಕಾರಿ ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಜಂಟಿ ನಿರ್ದೇಶಕರು–1 ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 8 | ಬಾಯ್ಲರುಗಳ ಸಹಾಯಕ ನಿರ್ದೇಶಕರು, (ಬಿಟಿಟಿಇ ಸೆಲ್) ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಬಾಯ್ಲರುಗಳ ಜಂಟಿ ನಿರ್ದೇಶಕರು, (ಬಿಟಿಟಿಇ ಸೆಲ್) ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| | **ಕ್ಷೇತ್ರ ಮಟ್ಟದ ಕಛೇರಿಗಳು – ಕಾರ್ಖಾನೆ ವಿಭಾಗ** | | |
| 9 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–1 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಜಂಟಿ ನಿರ್ದೇಶಕರು–1 ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 10 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–2 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಜಂಟಿ ನಿರ್ದೇಶಕರು–2 ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |

| ಕ್ರ. ಸ. | ಸಾರ್ವಜನಿಕ ಪ್ರಾಧಿಕಾರ ಮತ್ತು ಕಛೇರಿಗಳು | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|---|
| 11 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–3 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಜಂಟಿ ನಿರ್ದೇಶಕರು–1 ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ನಿರ್ದೇಶಕರು, ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 |
| 12 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–4, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–1 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 13 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–5, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–2 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 14 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–6, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–3 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 15 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–7, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–2 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 16 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ–8 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–1 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 17 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ–9 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–2 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 18 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ–10, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–2 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 19 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ–11, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–1 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 20 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ–12, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–3 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 21 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ–13, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–1 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 22 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ–14, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–3 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 23 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–1, ನಂ.1, 1ನೇ ಮುಖ್ಯರಸ್ತೆ, ಇಂಡಸ್ಟ್ರೀಯಲ್ ಎಸ್ಟೇಟ್ ಎದುರು, ಯಾದವಗಿರಿ, ಮೈಸೂರು – 570 020 | ಕಾರ್ಖಾನೆಗಳ ಜಂಟಿ ನಿರ್ದೇಶಕರು–1 ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 24 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು ವಿಭಾಗ–2, ನಂ.1, 1ನೇ ಮುಖ್ಯರಸ್ತೆ, ಇಂಡಸ್ಟ್ರೀಯಲ್ ಎಸ್ಟೇಟ್ ಎದುರು, ಯಾದವಗಿರಿ, ಮೈಸೂರು – 570 020 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–1, ನಂ.1, 1ನೇ ಮುಖ್ಯರಸ್ತೆ, ಇಂಡಸ್ಟ್ರೀಯಲ್ ಎಸ್ಟೇಟ್ ಎದುರು, ಯಾದವಗಿರಿ, ಮೈಸೂರು – 570 020 | – ಡಿಟೋ – |
| 25 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–1, 2ನೇ ಮಹಡಿ, ಉಮ್ಮಚಗಿ ಬಿಲ್ಡಿಂಗ್, ತೋಯಿಸ್ ರಸ್ತೆ, ಹುಬ್ಬಳ್ಳಿ–580 020 | ಕಾರ್ಖಾನೆಗಳ ಜಂಟಿ ನಿರ್ದೇಶಕರು–2 ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |

| ಕ್ರ. ಸ. | ಸಾರ್ವಜನಿಕ ಪ್ರಾಧಿಕಾರ ಮತ್ತು ಕಛೇರಿಗಳು | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|---|
| 26 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು ವಿಭಾಗ–2, 2ನೇ ಮಹಡಿ, ಉಮ್ಮಚಗಿ ಬಿಲ್ಡಿಂಗ್, ತೋಯಿಸ್ ರಸ್ತೆ, ಹುಬ್ಬಳ್ಳಿ–580 020 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–1, 2ನೇ ಮಹಡಿ, ಉಮ್ಮಚಗಿ ಬಿಲ್ಡಿಂಗ್, ತೋಯಿಸ್ ರಸ್ತೆ, ಹುಬ್ಬಳ್ಳಿ–580 020 | ನಿರ್ದೇಶಕರು, ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 |
| 27 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–1, 2ನೇ ಮಹಡಿ, ದಕ್ಷಿಣ ಭಾಗ, ಮಹಾನಗರ ಪಾಲಿಕೆ ಕಟ್ಟಡ, ಲಾಲ್‌ಬಾಗ್, ಮಂಗಳೂರು–575 003 | ಕಾರ್ಖಾನೆಗಳ ಜಂಟಿ ನಿರ್ದೇಶಕರು–1 ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 28 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು ವಿಭಾಗ–2, 2ನೇ ಮಹಡಿ, ದಕ್ಷಿಣ ಭಾಗ, ಮಹಾನಗರ ಪಾಲಿಕೆ ಕಟ್ಟಡ, ಲಾಲ್‌ಬಾಗ್, ಮಂಗಳೂರು–575 003 | ಕಾರ್ಖಾನೆಗಳ ಉಪ ನಿರ್ದೇಶಕರು, ಮಂಗಳೂರು ವಿಭಾಗ–1, 2ನೇ ಮಹಡಿ, ದಕ್ಷಿಣ ಭಾಗ, ಮಹಾನಗರ ಪಾಲಿಕೆ ಕಟ್ಟಡ, ಲಾಲ್‌ಬಾಗ್, ಮಂಗಳೂರು–575 003 | – ಡಿಟೋ – |
| 29 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಬಳ್ಳಾರಿ ವಿಭಾಗ, 2ನೇ ಮಹಡಿ, ಸಂಗೀತ ಕಾಂಪ್ಲೆಕ್ಸ್, ಶ್ಯಾಮಲ ಲಾಡ್ಜ್ ಹಿಂಭಾಗ, ಕೆಎಸ್‌ಆರ್‌ಟಿಸಿ ಬಸ್‌ಸ್ಟ್ಯಾಂಡ್ ಎದುರು, ಬಳ್ಳಾರಿ | ಕಾರ್ಖಾನೆಗಳ ಉಪ ನಿರ್ದೇಶಕರು, ಗುಲ್ಬರ್ಗಾ ವಿಭಾಗ, 1872/41, ವಸಂತನಗರ, ಎಂ.ಎಸ್.ಕೆ.ಮಿಲ್ಸ್ ರಸ್ತೆ, ಗುಲ್ಬರ್ಗಾ–585 101 | – ಡಿಟೋ – |
| 30 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–1, ಪಿ.ನಂ.17, ದತ್ತಪ್ರಸಾದ್ ಬಿಲ್ಡಿಂಗ್, ಕೆ.ಆರ್.ಲೇಔಟ್, ಕ್ಲಬ್ ರಸ್ತೆ, ಬೆಳಗಾವಿ–590 001 | ಕಾರ್ಖಾನೆಗಳ ಜಂಟಿ ನಿರ್ದೇಶಕರು–2 ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 31 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–2, ಪಿ.ನಂ.17, ದತ್ತಪ್ರಸಾದ್ ಬಿಲ್ಡಿಂಗ್, ಕೆ.ಆರ್.ಲೇಔಟ್, ಕ್ಲಬ್ ರಸ್ತೆ, ಬೆಳಗಾವಿ–590 001 | ಕಾರ್ಖಾನೆಗಳ ಉಪ ನಿರ್ದೇಶಕರು, ಬೆಳಗಾಂ ವಿಭಾಗ–1, ಪಿ.ನಂ.17, ದತ್ತಪ್ರಸಾದ್ ಬಿಲ್ಡಿಂಗ್, ಕೆ.ಆರ್.ಲೇಔಟ್, ಕ್ಲಬ್ ರಸ್ತೆ, ಬೆಳಗಾವಿ–590 001 | – ಡಿಟೋ – |
| 32 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ದಾವಣಗೆರೆ ವಿಭಾಗ, 280/5, ಆರ್.ಜಿ. ಕಾಂಪ್ಲೆಕ್ಸ್, 1ನೇ ಮಹಡಿ, ಚಾಮರಾಜಪೇಟೆ, ದಾವಣಗೆರೆ–577 001 | ಕಾರ್ಖಾನೆಗಳ ಉಪ ನಿರ್ದೇಶಕರು, ಹುಬ್ಬಳ್ಳಿ ವಿಭಾಗ–1, 2ನೇ ಮಹಡಿ, ಉಮ್ಮಚಗಿ ಬಿಲ್ಡಿಂಗ್, ತೋಯಿಸ್ ರಸ್ತೆ, ಹುಬ್ಬಳ್ಳಿ–580 020 | – ಡಿಟೋ – |
| 33 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ಶಿವಮೊಗ್ಗ ವಿಭಾಗ, 615/98, ಅಮರಾಕೃಪಾ, ಎಲ್‌ಎಲ್‌ಆರ್ ರಸ್ತೆ, ದುರ್ಗಿಗುಡಿ, ಶಿವಮೊಗ್ಗ–577 201 | ಕಾರ್ಖಾನೆಗಳ ಉಪ ನಿರ್ದೇಶಕರು, ಮಂಗಳೂರು ವಿಭಾಗ–1, 2ನೇ ಮಹಡಿ, ದಕ್ಷಿಣ ಭಾಗ, ಮಹಾನಗರ ಪಾಲಿಕೆ ಕಟ್ಟಡ, ಲಾಲ್‌ಬಾಗ್,ಮಂಗಳೂರು–575 003 | – ಡಿಟೋ – |
| 34 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ರಾಯಚೂರು ವಿಭಾಗ, ಉದಯನಗರ, ಸ್ಟೇಷನ್ ರಸ್ತೆ, ರಾಯಚೂರು–584 101 | ಕಾರ್ಖಾನೆಗಳ ಉಪ ನಿರ್ದೇಶಕರು, ಗುಲ್ಬರ್ಗಾ ವಿಭಾಗ, 1872/41, ವಸಂತನಗರ, ಎಂ.ಎಸ್.ಕೆ. ಮಿಲ್ಸ್ ರಸ್ತೆ, ಗುಲ್ಬರ್ಗಾ–585 101 | – ಡಿಟೋ – |
| 35 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ–1, 1872/41, ವಸಂತನಗರ, ಎಂ.ಎಸ್.ಕೆ.ಮಿಲ್ಸ್ ರಸ್ತೆ, ಗುಲ್ಬರ್ಗಾ–585 101 | ಕಾರ್ಖಾನೆಗಳ ಜಂಟಿ ನಿರ್ದೇಶಕರು–2 ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 36 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ತುಮಕೂರು ವಿಭಾಗ, ಸೆಂಟ್ ಮೇರಿಸ್ ಶಾಲೆ ರಸ್ತೆ, ಗಾಂಧಿನಗರ, ತುಮಕೂರು–572 102 | ಕಾರ್ಖಾನೆಗಳ ಉಪ ನಿರ್ದೇಶಕರು, ಮೈಸೂರು ವಿಭಾಗ–1, ನಂ.1, 1ನೇ ಮುಖ್ಯರಸ್ತೆ, ಇಂಡಸ್ಟ್ರೀಯಲ್ ಎಸ್ಟೇಟ್ ಎದುರು, ಯಾದವಗಿರಿ, ಮೈಸೂರು – 570 020 | – ಡಿಟೋ – |
| | **ಕ್ಷೇತ್ರ ಮಟ್ಟದ ಕಛೇರಿಗಳು – ಬಾಯ್ಲರು ವಿಭಾಗ** | | |
| 37 | ಬಾಯ್ಲರುಗಳ ಉಪ ನಿರ್ದೇಶಕರು, ಬೆಳಗಾಂ ವಿಭಾಗ, ವಿಭಾಗ–2, ಪಿ.ನಂ.17, ದತ್ತಪ್ರಸಾದ್ ಬಿಲ್ಡಿಂಗ್, ಕೆ.ಆರ್.ಲೇಔಟ್, ಕ್ಲಬ್ ರಸ್ತೆ, ಬೆಳಗಾವಿ–590 001 | ಬಾಯ್ಲರುಗಳ ಜಂಟಿ ನಿರ್ದೇಶಕರು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |

| ಕ್ರ. ಸ. | ಸಾರ್ವಜನಿಕ ಪ್ರಾಧಿಕಾರ ಮತ್ತು ಕಛೇರಿಗಳು | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|---|
| 38 | ಬಾಯ್ಲರುಗಳ ಉಪ ನಿರ್ದೇಶಕರು, ದಾವಣಗೆರೆ ವಿಭಾಗ, 280/5, ಆರ್.ಜಿ. ಕಾಂಪ್ಲೆಕ್ಸ್, 1ನೇ ಮಹಡಿ, ಚಾಮರಾಜಪೇಟೆ, ದಾವಣಗೆರೆ–577 001 | ಬಾಯ್ಲರುಗಳ ಜಂಟಿ ನಿರ್ದೇಶಕರು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ನಿರ್ದೇಶಕರು, ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 |
| 39 | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–1, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಬಾಯ್ಲರುಗಳ ಜಂಟಿ ನಿರ್ದೇಶಕರು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 40 | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–2, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಬಾಯ್ಲರುಗಳ ಜಂಟಿ ನಿರ್ದೇಶಕರು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 41 | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು, ಮಂಗಳೂರು ವಿಭಾಗ, 2ನೇ ಮಹಡಿ, ದಕ್ಷಿಣ ಭಾಗ, ಮಹಾನಗರ ಪಾಲಿಕೆ ಕಟ್ಟಡ, ಲಾಲ್‌ಬಾಗ್, ಮಂಗಳೂರು–575 003 | ಬಾಯ್ಲರುಗಳ ಜಂಟಿ ನಿರ್ದೇಶಕರು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 42 | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು, ಹುಬ್ಬಳ್ಳಿ ವಿಭಾಗ, 2ನೇ ಮಹಡಿ, ಉಮ್ಮಚಗಿ ಬಿಲ್ಡಿಂಗ್, ತೋಯಿಸ್ ರಸ್ತೆ, ಹುಬ್ಬಳ್ಳಿ–580 020 | ಬಾಯ್ಲರುಗಳ ಜಂಟಿ ನಿರ್ದೇಶಕರು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 43 | ಬಾಯ್ಲರುಗಳ ಸಹಾಯಕ ನಿರ್ದೇಶಕರು, ಮೈಸೂರು ವಿಭಾಗ, ನಂ.1,1ನೇ ಮುಖ್ಯರಸ್ತೆ, ಇಂಡಸ್ಟ್ರೀಯಲ್ ಎಸ್ಟೇಟ್ ಎದುರು, ಯಾದವಗಿರಿ, ಮೈಸೂರು – 570 020 | ಬಾಯ್ಲರುಗಳ ಜಂಟಿ ನಿರ್ದೇಶಕರು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 44 | ಬಾಯ್ಲರುಗಳ ಸಹಾಯಕ ನಿರ್ದೇಶಕರು, ಶಿವಮೊಗ್ಗ ವಿಭಾಗ, 615/98, ಅಮರಾಕೃಪಾ, ಎಲ್‌ಎಲ್‌ಆರ್ ರಸ್ತೆ, ದುರ್ಗಿಗುಡಿ, ಶಿವಮೊಗ್ಗ–577 201 | ಬಾಯ್ಲರುಗಳ ಜಂಟಿ ನಿರ್ದೇಶಕರು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |
| 45 | ಬಾಯ್ಲರುಗಳ ಸಹಾಯಕ ನಿರ್ದೇಶಕರು, ಗುಲ್ಬರ್ಗಾ ವಿಭಾಗ, 1872/41, ವಸಂತನಗರ, ಎಂ.ಎಸ್.ಕೆ.ಮಿಲ್ಸ್ ರಸ್ತೆ, ಗುಲ್ಬರ್ಗಾ–585 101 | ಬಾಯ್ಲರುಗಳ ಜಂಟಿ ನಿರ್ದೇಶಕರು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | – ಡಿಟೋ – |

ನಿರ್ದೇಶಕರು

**ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ**

**ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2000ರ ನಿಯಮ 2 ಮತ್ತು ನಿಯಮ 3(ಬಿ) ಅನ್ವಯ ಇಲಾಖಾ ಮಾಹಿತಿ ಪಡೆದುಕೊಳ್ಳಲು ನಾಗರಿಕರಿಗೆ ಇರುವ ಅನುಕೂಲಗಳ ಪ್ರಕಟಣೆ.**

1. **ಸಾಮಾನ್ಯ ವಿವರ :**

ಇಲಾಖೆಯು ರಾಜ್ಯ ಮಟ್ಟದ ಮುಖ್ಯ ಕಛೇರಿಯನ್ನು ಬೆಂಗಳೂರಿನಲ್ಲೂ ಹಾಗೂ ವಿವಿಧ ಅಧೀನ ಕಛೇರಿಗಳನ್ನು ಬೆಂಗಳೂರು, ಮೈಸೂರು, ಮಂಗಳೂರು, ಶಿವಮೊಗ್ಗ, ತುಮಕೂರು, ದಾವಣಗೆರೆ, ಹುಬ್ಬಳ್ಳಿ, ಬೆಳಗಾಂ, ರಾಯಚೂರು, ಬಳ್ಳಾರಿ ಮತ್ತು ಗುಲ್ಬರ್ಗಾ ಈ ಸ್ಥಳಗಳಲ್ಲಿಯೂ ಸ್ಥಾಪಿಸಿ ಕಾರ್ಯನಿರ್ವಹಿಸುತ್ತಿದೆ. ಇಲಾಖೆಯು ಕಾರ್ಖಾನೆ ವಿಭಾಗ ಮತ್ತು ಬಾಯ್ಲರುಗಳ ವಿಭಾಗ ಎಂಬ ಎರಡು ಪ್ರತ್ಯೇಕ ವಿಭಾಗಗಳಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ನಿರ್ದೇಶಕರು ಎರಡೂ ವಿಭಾಗಗಳಿಗೂ ಶಾಸನಾತ್ಮಕ ಮತ್ತು ಆಡಳಿತಾತ್ಮಕ ಮುಖ್ಯಸ್ಥರಾಗಿರುತ್ತಾರೆ. ಅವರ ಅಧೀನದಲ್ಲಿ ಕೇಂದ್ರ ಕಾರ್ಯಸ್ಥಾನದಲ್ಲಿ 03 ಜಂಟಿ ನಿರ್ದೇಶಕರು ಹಾಗೂ ವಿವಿಧ ಸ್ಥಳಗಳಲ್ಲಿ 10 ಉಪ ನಿರ್ದೇಶಕರುಗಳು, 13 ಹಿರಿಯ ಸಹಾಯಕ ನಿರ್ದೇಶಕರುಗಳು ಮತ್ತು 14 ಸಹಾಯಕ ನಿರ್ದೇಶಕರುಗಳು ಕಾರ್ಯನಿರ್ವಹಿಸುತ್ತಿದ್ದಾರೆ. ಕಾರ್ಖಾನೆಗಳ ಕಾಯ್ದೆ ಅಡಿ ನೋಂದಾವಣಿಗೊಂಡಿರುವ ಕಾರ್ಖಾನೆಗಳಲ್ಲಿ ದುಡಿಯುವ ಕಾರ್ಮಿಕ ವರ್ಗದ ಸುರಕ್ಷತೆ, ಆರೋಗ್ಯ ಮತ್ತು ಕಲ್ಯಾಣಕ್ಕೆ ಸಂಬಂಧಿಸಿದ ಕಾನೂನುಗಳನ್ನು ಜಾರಿಗೊಳಿಸಿ ಕಾರ್ಮಿಕರ ಹಿತಾಸಕ್ತಿ ಕಾಪಾಡುವುದು ಮತ್ತು ಬಾಯ್ಲರುಗಳು ಸುರಕ್ಷಿತವಾಗಿ ಕಾರ್ಯನಿರ್ವಹಿಸುವಂತೆ ನಿಗಾವಹಿಸುವುದು ಇಲಾಖೆಯ ಮುಖ್ಯ ಉದ್ದೇಶವಾಗಿದೆ. ಇಲಾಖೆಯ ಕೆಲವೇ ಕೆಲವು ಮುಖ್ಯ ಕರ್ತವ್ಯಗಳು, ಕಟ್ಟಡ ಮತ್ತು ಯಂತ್ರವಿನ್ಯಾಸದ ನಕ್ಷಾನುಮೋದನೆ, ನೋಂದಣಿ ಮತ್ತು ಲೈಸನ್ಸು ನೀಡಿಕೆ, ಬಾಯ್ಲರ್ ಹಾಗೂ ಅದಕ್ಕೆ ಸಂಬಂಧಪಟ್ಟ ಪರಿಕರಣಗಳ ನೋಂದಣಿ, ಪರಿವೀಕ್ಷಣೆ, ಲೈಸನ್ಸ್‌ಗಳ ವಾರ್ಷಿಕ ನವೀಕರಣ, ವಾರ್ಷಿಕ ಪ್ರಮಾಣ ಪತ್ರಗಳ ನೀಡಿಕೆ ಕುರಿತು ಪರಿವೀಕ್ಷಣೆ, ಅಪಘಾತಗಳ ತನಿಖೆ, ಕಾರ್ಮಿಕ ಆರೋಗ್ಯ ತಪಾಸಣೆ, ಇತ್ಯಾದಿ ಕೆಲಸ ಕಾರ್ಯಗಳನ್ನೊಳಗೊಂಡಿರುತ್ತದೆ.

ಮೇಲಿನ ಆಶಯಗಳನ್ನು ಸಾಧಿಸಲು ಇಲಾಖೆಯು ಈ ಕೆಳಕಂಡ ವಿವಿಧ ಕಾನೂನುಗಳನ್ನು ಜಾರಿಗೊಳಿಸುತ್ತದೆ.

(1) **ಕಾರ್ಖಾನೆಗಳ ಕಾಯ್ದೆ 1948,** (2) **ವೇತನ ಸಂದಾಯ ಕಾಯ್ದೆ 1936,** (3) **ಪ್ರಸೂತಿ ಸೌಲಭ್ಯ ಕಾಯ್ದೆ 1961,**

(4) **ಬಾಯ್ಲರುಗಳ ಕಾಯ್ದೆ 1923,** (5) **ಬಾಲಕಾರ್ಮಿಕರ (ನಿಷೇದ ಮತ್ತು ಪುನರ್‌ವಸತಿ) ಕಾಯ್ದೆ 1986,**

(6) **ಪರಿಸರ (ಸಂರಕ್ಷಣೆ) ಕಾಯ್ದೆ 1986** ರಲ್ಲಿನ ಕೆಲವು ಭಾಗಗಳು. ಹಾಗೂ ಈ ಕಾಯ್ದೆಗಳಡಿಯಲ್ಲಿ ರಚಿಸಲಾಗಿರುವ ನಿಯಮಗಳು.

ನಾಗರಿಕರು ಇಲಾಖೆಯ ಕಛೇರಿಗಳನ್ನು (ಸಕ್ಷಮ ಮತ್ತು ಸಾರ್ವಜನಿಕ ಪ್ರಾಧಿಕಾರಿಗಳ) ಸಂಪರ್ಕಿಸಿ ಪಡೆದುಕೊಳ್ಳಬಹುದಾದ ವಿವರ ಕೆಳಗಿನಂತಿದೆ.

**ಕಾರ್ಖಾನೆ ವಿಭಾಗ :**

(1) ಕಾರ್ಖಾನೆಗಳ ನಕ್ಷಾನುಮೋದನೆ, ನೋಂದಣಿ ಮತ್ತು ಲೈಸನ್ಸು ನೀಡಿಕೆ, ಲೈಸನ್ಸ್‌ಗಳ ನವೀಕರಣ, ಓವರ್‌ಟೈಂ ಕೆಲಸಕ್ಕೆ ಪೂರ್ವಾನುಮತಿ ಇತ್ಯಾದಿ ಕೆಲಸ ಕಾರ್ಯಗಳು.

(2) ಕಾರ್ಖಾನೆಗಳಲ್ಲಿ ದುಡಿಯುತ್ತಿರುವ ಕಾರ್ಮಿಕರ ಹಿತರಕ್ಷಣೆಗಾಗಿ ಮೇಲೆ ನಮೂದಿಸಿದ ಕಾನೂನುಗಳ ವಿಚಾರದಲ್ಲಿ ಪರಿವೀಕ್ಷಣೆ ವಿಧಿ–ವಿಧಾನಗಳನ್ನು ಕುರಿತಂತೆ.

(3) ಅಪಾಯಕಾರಿ/ಅತಿ ಅಪಾಯಕಾರಿ ಕಾರ್ಖಾನೆಗಳಿಂದ ಅಲ್ಲಿ ದುಡಿಯುತ್ತಿರುವ ಕಾರ್ಮಿಕರು ಮತ್ತು ಅವುಗಳ ಸುತ್ತ ವಾಸಿಸುತ್ತಿರುವ ಜನ ಸಾಮಾನ್ಯರಿಗೆ ದುಷ್ಪರಿಣಾಮ ಉಂಟಾಗಬಹುದಾದ ಸಂದರ್ಭಗಳಲ್ಲಿ,

(4) ನೊಂದಾಯಿತಗಳ ಕಾರ್ಖಾನೆಗಳು ಯಾವುದೇ ಸಂದರ್ಭದಲ್ಲಿ ಬಾಲ ಕಾರ್ಮಿಕರನ್ನು ನೇಮಿಸಿಕೊಂಡಾಗ,

(5) ಕಾರ್ಮಿಕರು ಮತ್ತು ಇತರೆ ಕಾರ್ಯನಿರತ ಸಿಬ್ಬಂದಿಗೆ ಸುರಕ್ಷತಾ ಕಾರ್ಯವಿಧಾನದ ಬಗ್ಗೆ ತರಬೇತಿ, ಪ್ರತ್ಯಕ್ಷಕೆ, ಚಿತ್ರಪ್ರದರ್ಶನ ಇತ್ಯಾದಿ ಪರಿಕರಗಳ ಅವಶ್ಯಕತೆ ಕಂಡು ಬಂದಾಗ,

(6) ಸಂಭವನೀಯ ವೃತ್ತಿ ಖಾಹಿಲೆಗಳಿಗೆ ಪುಷ್ಠಿ ಕೊಡುವ ಕೆಲಸದ ವಾತಾವರಣ ಅಥವಾ ಪರಿಸರ ಕಂಡು ಬಂದ ಸಂದರ್ಭಗಳಲ್ಲಿ,

(7) ಕಾರ್ಖಾನೆಗಳಲ್ಲಿ ವಿವಿಧ ಲಿಫ್ಟಿಂಗ್ ಮತ್ತು ಹಾಯಿಸ್ಟಿಂಗ್ ಯಂತ್ರಗಳ ಭಾಗಗಳ ಮೇಲೆ ಬೀಳುವ ಒತ್ತಡಗಳನ್ನು ಪರೀಕ್ಷಿಸಿ ಅಪಾಯ ಸಂಭವಿಸದಂತೆ ಸೂಕ್ತ ಮಾರ್ಗೋಪಾಯಗಳನ್ನು ನೀಡುವ ಸಲುವಾಗಿ ಆ ಕ್ಷೇತ್ರದಲ್ಲಿ ಪರಿಣಿತಿಯುಳ್ಳ ವ್ಯಕ್ತಿಗಳನ್ನು ಗುರುತಿಸಿ ಪರಿವೀಕ್ಷಣೆಗೆ ಅನುಮತಿ ನೀಡುವ ಕೆಲಸ ಕಾರ್ಯಗಳಿಗೆ ಸಂಬಂಧಪಟ್ಟಂತೆ,

(8) ಕಾರ್ಖಾನೆಗಳು ಶಾಸನಬದ್ದವಾಗಿ ಸಲ್ಲಿಸಬೇಕಾದ ವಾರ್ಷಿಕ / ಅರ್ಧವಾರ್ಷಿಕ ವರದಿಗಳ ಸಂಬಂಧ

(9) ವೇತನ ಸಂದಾಯ, ವೇತನ ಕಡಿತ, ವಿಳಂಬ ವೇತನ ನೀಡಿಕೆ ಇತ್ಯಾದಿ ವಿಷಯಗಳಲ್ಲಿ,

(10) ಮಹಿಳಾ ಕಾರ್ಮಿಕರ ಪ್ರಸೂತಿ ಸೌಲಭ್ಯ, ಲೈಂಗಿಕ ಕಿರುಕುಳ, ಪ್ರಸೂತಿ ಬೋನಸ್ ಇತ್ಯಾದಿ ವಿಷಯಗಳನ್ನು ಕುರಿತು.

ಮೇಲಿನ ವಿಷಯಗಳಿಗೆ ಸಂಬಂಧಿಸಿದಂತೆ, ನಾಗರೀಕರು ಮಾಹಿತಿ ಹಕ್ಕು ಅಧಿನಿಯಮದಡಿ ಅಪೇಕ್ಷಿಸುವ ದಾಸ್ತಾವೇಜುಗಳನ್ನು ಆಯಾಯ ಸಾರ್ವಜನಿಕ ಹಾಗೂ ಸಕ್ಷಮ ಪ್ರಾಧಿಕಾರದಿಂದ ಪಡೆಯಬಹುದಾಗಿದೆ.

**ಸಂಪರ್ಕಿಸಬೇಕಾದ ವಿಳಾಸ**

1. ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು
(ಹಾಗೂ ಮೇಲ್ಮನವಿ ಪ್ರಾಧಿಕಾರ)
ಕಾರ್ಮಿಕ ಭವನ, ಡೈರಿ ಸರ್ಕಲ್ ಹತ್ತಿರ,
ಬನ್ನೇರುಘಟ್ಟ ರಸ್ತೆ, ಬೆಂಗಳೂರು–29.

2. ಕಾರ್ಖಾನೆಗಳ ಜಂಟಿ ನಿರ್ದೇಶಕರು–1/ಕಾರ್ಖಾನೆಗಳ ಜಂಟಿ ನಿರ್ದೇಶಕರು–2
(ಹಾಗೂ ಸಾರ್ವಜನಿಕ ಮತ್ತು ಸಕ್ಷಮ ಪ್ರಾಧಿಕಾರ)
ಕಾರ್ಮಿಕ ಭವನ, ಡೈರಿ ಸರ್ಕಲ್ ಹತ್ತಿರ,
ಬನ್ನೇರುಘಟ್ಟ ರಸ್ತೆ, ಬೆಂಗಳೂರು–29.

**ಬಾಯ್ಲರು ವಿಭಾಗ**

1. ಬಾಯ್ಲರುಗಳ ನೊಂದಣಿ ವಾರ್ಷಿಕ ಪರಿವೀಕ್ಷಣೆ ಇತ್ಯಾದಿ ಕೆಲಸಕಾರ್ಯಗಳಿಗೆ ಸಂಬಂಧಿಸಿದಂತೆ,
2. ಬಾಯ್ಲರ್ಸ್, ಏಕನಾಮೈಸಾರ್ಸ್, ವಾಲ್ವ್ಸ್, ಹಬೆಕೊಳವೆಗಳು ಹಾಗೂ ಇತರೆ ಪ್ರೆಶರ್ ಪಾರ್ಟ್ಸ್‌ಗಳ ತಯಾರಿಕ ನಕ್ಷೆಗಳ ಅನುಮೋದನೆ ವಿಷಯಗಳಲ್ಲಿ,
3. ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷೆ, ಬಾಯ್ಲರ್ ಅಟೆಂಡರ್ಸ್ ಪರೀಕ್ಷೆ ಮತ್ತು ವೆಲ್ಡರ್ಸ್ ಪರೀಕ್ಷೆಗೆ ಸಂಬಂಧಿಸಿದ ಕೆಲಸಗಳು.

ಮೇಲಿನ ವಿಷಯಗಳಿಗೆ ಸಂಬಂಧಿಸಿದಂತೆ, ನಾಗರೀಕರು ಮಾಹಿತಿ ಹಕ್ಕು ಅಧಿನಿಯಮದಡಿ ಅಪೇಕ್ಷಿಸುವ ದಾಸ್ತಾವೇಜುಗಳನ್ನು ಆಯಾಯ ಸಾರ್ವಜನಿಕ ಹಾಗೂ ಸಕ್ಷಮ ಪ್ರಾಧಿಕಾರದಿಂದ ಪಡೆಯಬಹುದಾಗಿದೆ.

**ಸಂಪರ್ಕಿಸಬೇಕಾದ ವಿಳಾಸ**

1. ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು
(ಹಾಗೂ ಮೇಲ್ಮನವಿ ಪ್ರಾಧಿಕಾರ)
ಕಾರ್ಮಿಕ ಭವನ, ಡೈರಿ ಸರ್ಕಲ್ ಹತ್ತಿರ,
ಬನ್ನೇರುಘಟ್ಟ ರಸ್ತೆ, ಬೆಂಗಳೂರು–29.

2. ಬಾಯ್ಲರುಗಳ ಜಂಟಿ ನಿರ್ದೇಶಕರು
(ಹಾಗೂ ಸಾರ್ವಜನಿಕ ಮತ್ತು ಸಕ್ಷಮ ಪ್ರಾಧಿಕಾರ)
ಕಾರ್ಮಿಕ ಭವನ, ಡೈರಿ ಸರ್ಕಲ್ ಹತ್ತಿರ,
ಬನ್ನೇರುಘಟ್ಟ ರಸ್ತೆ, ಬೆಂಗಳೂರು–29.

**ಕೆಲವು ಮುಖ್ಯ ಕೆಲಸ ಕಾರ್ಯಗಳಿಗೆ ಸಾರ್ವಜನಿಕರು ಸಲ್ಲಿಸಬೇಕಾದ ದಾಸ್ತಾವೇಜುಗಳು:**

**ಕಾರ್ಖಾನೆ ವಿಭಾಗ**

| | | |
|---|---|---|
| 1. **ನಕ್ಷಾನುಮೋದನೆ** | : | ಫಾರಂ–1ರಲ್ಲಿ ಅರ್ಜಿ + ಪ್ರತಿ ನಕ್ಷಾನುಮೋದನೆಗೆ ರೂ.250/– ಮತ್ತು ರೂ.500/– (ನೇಮಿಸಿಕೊಂಡ ಕಾರ್ಮಿಕರ ಸಂಖ್ಯೆಗನುಗುಣವಾಗಿ) ಶುಲ್ಕ ಹಾಗೂ ಇತರೆ ಅವಶ್ಯ ದಾಖಲೆಗಳು |
| 2. **ಕಾರ್ಖಾನೆಗಳ ನೊಂದಣಿ ಮತ್ತು ಲೈಸನ್ಸ್ ನೀಡಿಕೆ** | : | ಫಾರಂ–2ರಲ್ಲಿ ಅರ್ಜಿ + ನಿಯಮ 5ರ ಟೇಬಲ್ ಎ ಮತ್ತು ಬಿ ನಂತೆ ಶುಲ್ಕ ಹಾಗೂ ಇತರೆ ಅವಶ್ಯ ದಾಖಲೆಗಳು. |
| 3. **ಲೈಸನ್ಸು ನವೀಕರಣ** | : | ಫಾರಂ–2ರಲ್ಲಿ ಅರ್ಜಿ + ನಿಯಮ 5ರ ಟೇಬಲ್ ಎ ಮತ್ತು ಬಿ ನಂತೆ ಶುಲ್ಕ ಹಾಗೂ ಇತರೆ ಅವಶ್ಯ ದಾಖಲೆಗಳು. |
| 4. **ಲೈಸನ್ಸುಗಳ ನಕಲು ನೀಡಿಕೆ, ತಿದ್ದುಪಡಿ, ವರ್ಗಾವಣೆ** | : | ಫಾರಂ–2 ರಲ್ಲಿ ಅರ್ಜಿ + ಮೂಲ ಲೈಸನ್ಸ್ ಜೊತೆಗೆ ನಿಗಧಿತ ಶುಲ್ಕ (ಕ್ರಮವಾಗಿ ರೂ. 250/–, ರೂ. 100/–) |

5. **ಹೆಚ್ಚುವರಿ ವೇಳೆ ಕೆಲಸ ಮಾಡಲು ವಿನಾಯಿತಿ** : ಕೋರಿಕೆ ಅರ್ಜಿ + ರೂ. 2/– ರ ಕೋರ್ಟ್ ಫೀ ಸ್ಟ್ಯಾಂಪು.

6. **ಅರ್ಹ ವ್ಯಕ್ತಿಗಳ ದೃಢೀಕೃತ ಪ್ರಮಾಣ ಪತ್ರ ನೀಡಿಕೆ** : ಫಾರಂ – 1ಬಿ ರಲ್ಲಿ ಅಥವಾ ಫಾರಂ 1 ಸಿ ರಲ್ಲಿ ಅರ್ಜಿ+ನಿಗಧಿತ ಶುಲ್ಕ (ಪ್ರತಿ ವ್ಯಕ್ತಿಗಳಿಗೆ ರೂ. 1000/– ಪ್ರತಿ ಸಂಸ್ಥೆಗಳಿಗೆ ರೂ. 2000/–)

**ವಿಶೇಷ ಸೂಚನೆ:** ಹೆಚ್ಚಿನ ಮಾಹಿತಿಗೆ ಆಯಾಯ ರಾಜ್ಯಮಟ್ಟದ / ಜಿಲ್ಲಾಮಟ್ಟದ ಅಧಿಕಾರಿಗಳನ್ನು ಸಂಪರ್ಕಿಸುವುದು.

**ಬಾಯ್ಲರು ವಿಭಾಗ**

1. **ನಕ್ಷಾನುಮೋದನೆ:**

ಬಾಯ್ಲರ್ಸ್, ಹಬೆಕೊಳವೆಗಳು, ಮೌಂಟಿಂಗ್ಸ್ ಮತ್ತು ಫಿಟ್ಟಿಂಗ್ಸ್ ಹಾಗೂ ಇತರೆ ಪೂರಕ ಸಾಧನಗಳ ಸಂಬಂಧ ಪ್ರತ್ಯೇಕವಾದ ನಕ್ಷೆಗಳನ್ನು ತ್ರಿಪ್ರತಿಗಳಲ್ಲಿ ಜೊತೆಗೆ ರೆಗ್ಯುಲೇಶನ್ 393 A(a), 395, 395 A(2), 395 B (d) ಹಾಗೂ ನಿಯಮ 39 (3) (i) ಪ್ರಕಾರ ನಿಗದಿಪಡಿಸಿರುವಂತೆ ಶುಲ್ಕ ಪಾವತಿಸಿದ ಚಲನ್‌ಗಳನ್ನು ಸಲ್ಲಿಸಬೇಕು.

2. **ನೊಂದಾವಣಿ:**

ಬಾಯ್ಲರ್ಸ್ ಹಬೆಕೊಳವೆಗಳ ಹಾಗೂ ಇತರೆ ಪೂರಕ ಸಾಧನಗಳ ಸಂಬಂಧ ಮೂಲ ದಾಖಲೆಗಳು/ಪ್ರಮಾಣ ಪತ್ರಗಳ ಜೊತೆಗೆ ರೆಗ್ಯುಲೇಶನ್ 385, 395 A(2), 395 B(a) & (b) ಹಾಗೂ ನಿಯಮ 39 (3) (c) ಪ್ರಕಾರ ನಿಗದಿಪಡಿಸಿರುವಂತೆ ಶುಲ್ಕ ಪಾವತಿಸಿದ ಚಲನ್‌ಗಳನ್ನು ಸಲ್ಲಿಸಬೇಕು.

3. **ವಾರ್ಷಿಕ ತಪಾಸಣೆ ಮತ್ತು ಪ್ರಮಾಣ ಪತ್ರಗಳ ನೀಡಿಕೆ:**

ಬಾಯ್ಲರ್ಸ್ ಹಬೆಕೊಳವೆ ಮತ್ತು ಎಕಾನಾಮೈಸರ್ಸ್‌ಗಳನ್ನು ಪರಿವೀಕ್ಷಿಸಿ ಪ್ರಮಾಣ ಪತ್ರಗಳನ್ನು ನೀಡಲು ನಮೂನೆ–ಜೆ ನಲ್ಲಿ ಅರ್ಜಿ, ಜೊತೆಗೆ ಬಾಯ್ಲರ್ ನಿಯಮ 39, 73 ಹಾಗೂ ಎಕನಾಮೈಸರ್ಸ್ ನಿಯಮ 18 (3) ಪ್ರಕಾರ ನಿಗದಿಪಡಿಸಿರುವಂತೆ ಶುಲ್ಕ ಪಾವತಿಸಿದ ಚಲನ್‌ಗಳನ್ನು ಸಲ್ಲಿಸಬೇಕು.

4. **ಬಾಯ್ಲರ್ಸ್ ಅಟೆಂಡೆಂಟ್ಸ್, ಇಂಜಿನಿಯರ್ಸ್ ಮತ್ತು ವೆಲ್ಡರ್ಸ್ ಪರೀಕ್ಷೆಗೆ:**

ನಿಗದಿತ ನಮೂನೆಯ ಅರ್ಜಿ ಜೊತೆಗೆ ಅಟೆಂಡೆಂಟ್ಸ್ ನಿಯಮ 24(1) & 24(11), ಆಪರೇಷನ್ ಇಂಜಿನಿಯರ್ಸ್ ನಿಯಮ 44 ಮತ್ತು ರೆಗ್ಯುಲೇಷನ್ಸ್ 616ರ ಪ್ರಕಾರ ನಿಗದಿಪಡಿಸಿರುವಂತೆ ಶುಲ್ಕ ಪಾವತಿಸಿದ ಚಲನ್‌ಗಳನ್ನು ನಿರ್ದೇಶಕರಿಗೆ / ಆಯಾ ಪರೀಕ್ಷಾ ಮಂಡಲಿ ಕಾರ್ಯದರ್ಶಿ, ಬೆಂಗಳೂರು ಅವರಿಗೆ ಸಲ್ಲಿಸಬೇಕು.

**ವಿಶೇಷ ಸೂಚನೆ:** ಹೆಚ್ಚಿನ ಮಾಹಿತಿಗೆ ಆಯಾಯ ರಾಜ್ಯಮಟ್ಟದ / ಜಿಲ್ಲಾಮಟ್ಟದ ಅಧಿಕಾರಿಗಳನ್ನು ಸಂಪರ್ಕಿಸುವುದು.

ಪಿ.ಆರ್. 1526 ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು, ಬೆಂಗಳೂರು.

## UNIVERSITY OF AGRICULTURAL SCIENCES, BANGALORE

**Administrative Office, GKVK, Bangalore-560065**

**Corrigendum No. AO/RT/11/28/2004-05, Dated: 8th November 2004**

The number of posts in the Notification No.AO/RT/11/28/2004-05 dated 5-10-2004 inviting applications for the Officers posts in the University of Agricultural Sciences, Bangalore, which appeared in Karnataka Gazette dated 21-10-2004 (page 1865-66) may be read as one, against each post indicated at Sl.No. 2 to 5.

By Order

P.D. 67 Administrative Officer, GKVK, Bangalore.

## PROCEEDINGS OF THE DIRECTOR OF MINES AND GEOLOGY, BANGALORE

**Sub:** Restoration of Mining lease No. 1559 in favour of Sri R.G. Janthakal.

**Ref:** 1) Determination order No.DMG/DCB-2-ML 1559 97-98/5336 dated: 3.7.1997.
2) Government of India Final order - 79/2002 dated: 24.5.02.
3) Representation dated:27.10.2004.

**Preamble:-**

A mining lease No.1559 was granted in yeralakatte village, Jagalur Taluk, Chitradurga District to Sri R.G. Janthakal over an extent of 64.75 Hectares for Manganese ore for a period of 20 years with effect from 13.12.1978.

The lessee was due to pay a sum of Rs.92,231 towards arrears of Royalty etc and also kept the Mining Block Idle. The Government in the order dated 27.5.96 accorded for the determine of the aforesaid lease for after affording an opportunity to the lessee.

Aggrieved by the determination order dated 3.7.1997 the applicant filed a revision application under rule 54 of MCRS 1960 before the Government of India on 6.10.1997. Now M/s Sri R.G. Janathakal has made a representation on 27.10.2004 requesting for restoration of mining lease No.1559 held by them. Also they have cleared all the mining dues payable to the Government.

**Order No. DMG-DCB-2/ML 1559/2004-05, Dated: 28th October 2004**

In view of the facts stated in the preamble I.Dr.M. Basappa Reddy Director of Mines and Geology in exercise of the power conferred by the Government Notification No.CI 3 MNM 95 Dated: 27.5.95 hereby order restoration of Mining lease No.1559 with effect from the date of determination in favour of Sri R.G. Janthakal over an area of 64.75 HC located in yeralakatte village of Jagalur Taluk, Chitradurga District.

DIRECTOR

P.R. 1540 Department of Mines and Geology, Bangalore.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ:** ಕೊಪ್ಪಳ ಜಿಲ್ಲೆ ಲಿಂಗಸೂಗೂರು ತಾಲ್ಲೂಕು ಮುದಗಲ್ಲು ಗ್ರಾಮದಲ್ಲಿ ಗ್ರೇ ಗ್ರಾನೈಟ್‌ಗಾಗಿ ಮೆ: ಇಂಪೀರಿಯಲ್ ರವರಿಗೆ ಮಂಜೂರಾದ ಕಲ್ಲು ಗಣಿ ಗುತ್ತಿಗೆ ಸಂ. 6254ರ ಗುತ್ತಿಗೆಯನ್ನು ಅಧ್ಯರ್ಪಣೆ ಮಾಡುವ ಬಗ್ಗೆ.

**ಉಲ್ಲೇಖ:** 1. ಕೇಂದ್ರ ಕಛೇರಿ ಪತ್ರ ಸಂ:ಗಭೂಇ:ಕಗಗು:91-92 ದಿ:3-5-1991.

2. ಗುತ್ತಿಗೆದಾರರು ತಮ್ಮ ಪತ್ರ ದಿನಾಂಕ 3-3-93 ರಲ್ಲಿ ಅಧ್ಯರ್ಪಣೆಗಾಗಿ ಕೋರಿರುವ ಬಗ್ಗೆ.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆಯ ಲಿಂಗಸೂಗೂರು ತಾಲ್ಲೂಕು ಮುದಗಲ್ಲು ಗ್ರಾಮದ ಸರ್ವೆ ನಂ. 403:2 ರಲ್ಲಿ 5-00 ಎಕರೆಗೆ ಗ್ರೇ ಗ್ರಾನೈಟ್‌ಗಾಗಿ ದಿ:3.5.1991 ರಿಂದ 5 ವರ್ಷಗಳಿಗಾಗಿ ಮೆ: ಇಂಪೀರಿಯಲ್ ಗ್ರಾನೈಟ್ಸ್ ರವರಿಗೆ ಕಲ್ಲುಗಣಿ ಗುತ್ತಿಗೆಯನ್ನು ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ದಿನಾಂಕ 3.3.93ರ ಪತ್ರದಲ್ಲಿ ಸದರಿ ಪ್ರದೇಶದಲ್ಲಿ ಗುತ್ತಿಗೆಯನ್ನು ಅಧ್ಯರ್ಪಣೆ ಮಾಡಿಕೊಳ್ಳಲು ಕೋರಿದ್ದಾರೆ.

ಈ ಬಗ್ಗೆ ಕಡತವನ್ನು ಪರಿಶೀಲಿಸುತ್ತಿರುವ ಹಂತದಲ್ಲಿರುವಾಗ ಸದರಿ ಗುತ್ತಿಗೆದಾರರು 1991ನೇ ಸಾಲಿನ ಅಂತ್ಯದವರೆಗೆ ರೂ.16582-00 ಗಳಲ್ಲಿ 1/4 ಸ್ಥಿರ ಬಾಡಿಗೆಯನ್ನು ಹೊಂದಾಣಿಕೆ ಮಾಡಿಕೊಂಡು ಉಳಿದ ಬಾಕಿ ರೂ. 10332-00 ಗಳನ್ನು ಪಾವತಿಸುವಂತೆ ತಿಳಿಸಲಾಗಿದ್ದು, ಅದರಂತೆ ಗುತ್ತಿಗೆದಾರರು ಬಾಕಿಯನ್ನು ದಿನಾಂಕ 3.3.93 ರಂದು ಪಾವತಿಸಿ ಅಧ್ಯರ್ಪಣೆಗಾಗಿ ಮನವಿ ಸಲ್ಲಿಸಿರುತ್ತಾರೆ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಗುತ್ತಿಗೆಯ ಮೇಲಿನ ಬಾಕಿಯನ್ನು ಪಾವತಿಸಿ ಉಳಿದ ಬಾಕಿಗೆ ಭದ್ರತಾ ಠೇವಣಿ ಮೊತ್ತವನ್ನು ಹೊಂದಾಣಿಕೆ ಮಾಡಿಕೊಂಡು ಯಾವುದೇ ಬಾಕಿ ಉಳಿದಿಲ್ಲದೆ ಇರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು ಹಾಗೂ 19 (3) ರಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಐ 418 ಎಂ.ಆರ್.ಸಿ. 92 ದಿ: 2.7.1994 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಅಧ್ಯರ್ಪಣೆಯನ್ನು ಒಪ್ಪಿಕೊಳ್ಳಬೇಕಾಗಿದೆ.

**ಆದೇಶ ಸಂ:ಗಭೂಇ:ಕಗಗು 6254:2004-05/10317 ದಿನಾಂಕ: 28ನೇ ಅಕ್ಟೋಬರ್ 2004**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಹಾಗೂ 19(3) ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಕೊಪ್ಪಳ ಜಿಲ್ಲೆಯ ಲಿಂಗಸೂಗೂರು ತಾಲ್ಲೂಕು ಮುದಗಲ್ಲು ಗ್ರಾಮದ ಸರ್ವೆ ನಂ. 403/2 ರಲ್ಲಿ 5-00 ಎಕರೆಗೆ ಗ್ರೇ ಗ್ರಾನೈಟ್‌ಗಾಗಿ ನೀಡಲಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂ 6254 ನ್ನು ದಿನಾಂಕ: 3.6.93 ರಂತೆ ಜಾರಿಗೆ ಬರುವಂತೆ ಅಧ್ಯರ್ಪಣೆಯನ್ನು ಒಪ್ಪಿಕೊಳ್ಳಲಾಗಿದೆ (2) ಜಾಮೀನು ಠೇವಣಿಯನ್ನು ಇಲಾಖೆಗೆ ಬರಬೇಕಾದ ಹಣಕ್ಕೆ ಹೊಂದಾಣಿಕೆಯನ್ನು ಮಾಡಿಕೊಳ್ಳಲು ಆದೇಶಿಸಿದೆ.

ನಿರ್ದೇಶಕರು

ಪಿ.ಆರ್. 1541 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ತಾಮಸಂದ್ರ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಮೆ: ಯನೆಪೋಯ ಮಿನರಲ್ಸ್ ಅಂಡ್ ಗ್ರಾನೈಟ್ಸ್ ಲಿ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:402ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ:** 1. ಕೇಂದ್ರ ಕಛೇರಿ ಪತ್ರ ಸಂಖ್ಯೆ:ಗಭೂಇ:ಡಿಸಿಬಿ:ಕಗಗು:402:2003-04:13687 ದಿ:29-5-2004 ಮತ್ತು 29-6-2004.

2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ:ಗಭೂಇ:ಉನಿಕ:ಡಿಸಿಬಿ:ಕಗಗು:402:2004-05:7200 ದಿನಾಂಕ: 18.8.2004.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ತಾಮಸಂದ್ರ ಗ್ರಾಮದ ಸರ್ವೆ ನಂ. 84 ರಲ್ಲಿ ಮೆ: ಯನೆಪೋಯ ಮಿನರಲ್ಸ್ ಅಂಡ್ ಗ್ರಾನೈಟ್ಸ್ ಲಿ ರವರಿಗೆ 0-30 ಎಕರೆಗೆ ದಿನಾಂಕ:21.12.2000 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರಗಳಂತೆ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.27,288/-ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿ ಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1)ರಂತೆ ಸರ್ಕಾರದ ಅಧಿಸೂಚನೆ-III ಸಂಖ್ಯೆ:ಸಿಐ418 ಎಂಆರ್‌ಸಿ 92 ದಿನಾಂಕ:2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಬೇಕಾಗಿರುತ್ತದೆ.

**ಆದೇಶ ಸಂ:ಗಭೂಇ:ಡಿ.ಸಿ.ಬಿ:ಕಗಗು 402:2004-05/10018 ದಿನಾಂಕ: 25ನೇ ಅಕ್ಟೋಬರ್ 2004**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ ತಾಮಸಂದ್ರ ಗ್ರಾಮದ ಸರ್ವೆ ನಂ.84ರಲ್ಲಿ 0-30 ಎಕರೆಗೆ ಮಲ್ಟಿಕಲರ್ ಗ್ರಾನೈಟ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:402ನ್ನು ಗುತ್ತಿಗೆ ನಿಷ್ಕ್ರಿಯವಾಗಿಟ್ಟಿರುವ ಕಾರಣ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ನಿರ್ದೇಶಕರು

ಪಿ.ಆರ್. 1542 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರ ತಾಲ್ಲೂಕು ಮರಳೆಬೇಕುಪ್ಪೆ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಮೆ: ಮಂಜುನಾಥ ಓವರ್‌ಸೀಸ್ ಟ್ರೇಡರ್ಸ್ ಲಿ., ರವರಿಗೆ ಮಂಜೂರಾದ ಕಲ್ಲು ಗಣಿ ಗುತ್ತಿಗೆ ಸಂ. 431ರ ಗುತ್ತಿಗೆಯನ್ನು ಅಧ್ಯರ್ಪಣೆ ಮಾಡುವ ಬಗ್ಗೆ.

**ಉಲ್ಲೇಖ:** 1. ಕೇಂದ್ರ ಕಛೇರಿ ಪತ್ರ ಸಂಖ್ಯೆ:ಗಭೂಇ:ಕಗಗು:470:95-96:5970 ದಿ:9-8-2004.

2. ಗುತ್ತಿಗೆದಾರರು ತಮ್ಮ ಪತ್ರ ದಿನಾಂಕ 26.3.2002 ರಲ್ಲಿ ಅಧ್ಯರ್ಪಣೆಗಾಗಿ ಕೋರಿರುವ ಬಗ್ಗೆ.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಮರಳೆಬೇಕುಪ್ಪೆ ಗ್ರಾಮದಲ್ಲಿ ಸರ್ವೆ ನಂ. 695 ರಲ್ಲಿ 5-00 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ದಿ: 12-4-2001 ರಿಂದ 10 ವರ್ಷಗಳಿಗಾಗಿ ಮೆ: ಮಂಜುನಾಥ ಓವರ್‌ಸೀಸ್ ಟ್ರೇಡರ್ಸ್ ಲಿ., ರವರಿಗೆ ಕಲ್ಲುಗಣಿ ಗುತ್ತಿಗೆಯನ್ನು ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ದಿನಾಂಕ 26.3.2002ರ ಪತ್ರದಲ್ಲಿ ಸದರಿ ಪ್ರದೇಶದಲ್ಲಿ ಗುತ್ತಿಗೆಯನ್ನು ಅಧ್ಯರ್ಪಣೆ ಮಾಡಿಕೊಳ್ಳಲು ಕೋರಿದ್ದಾರೆ.

ಈ ಬಗ್ಗೆ ಕಡತವನ್ನು ಪರಿಶೀಲಿಸುತ್ತಿರುವ ಹಂತದಲ್ಲಿರುವಾಗ ಸದರಿ ಗುತ್ತಿಗೆದಾರರು 2001-02ನೇ ಸಾಲಿನ ಅಧ್ಯರ್ಪಣೆ ಕೋರಿರುವ ದಿನಾಂಕದವರೆಗಿನ ಬಾಕಿ ರೂ. 73,979 ಗಳು ಇದ್ದು ಈ ಬಾಕಿಗೆ ಗುತ್ತಿಗೆ ಮಂಜೂರಾತಿ ಸಮಯದಲ್ಲಿ ಪಡೆಯಲಾದ ಸ್ಥಿರ ತೆರಿಗೆ ಮುಂಗಡ ರೂ. 37,500-00 ಗಳನ್ನು ಹಾಗೂ ಭದ್ರತಾ ಠೇವಣಿ ರೂ. 25,000-00 ಗಳನ್ನು ಬಾಕಿ ಹೊಂದಾಣಿಕೆ ಮಾಡಿಕೊಂಡು ಉಳಿದ ಬಾಕಿ ರೂ. 11,479-00 ಹಾಗೂ ಬಡ್ಡಿ ಶೇಕಡ 15 ರಂತೆ ಪಾವತಿಯನ್ನು ದಿನಾಂಕ 8-9-2004 ರಂದು ರೂ. 11,479.00 ಮತ್ತು ಬಡ್ಡಿ ಬಾಕಿಯನ್ನು ದಿನಾಂಕ 21.10.2004 ರಂದು ರೂ. 4500 ಗಳನ್ನು ಪಾವತಿಸಿ ಗುತ್ತಿಗೆ ಅಧ್ಯರ್ಪಣೆಗಾಗಿ ಮನವಿ ಸಲ್ಲಿಸಿರುತ್ತಾರೆ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಗುತ್ತಿಗೆಯ ಮೇಲಿನ ಬಾಕಿಯನ್ನು ಪಾವತಿಸಿ ಉಳಿದ ಬಾಕಿಗೆ ಭದ್ರತಾ ಠೇವಣಿ ಮೊತ್ತವನ್ನು ಹೊಂದಾಣಿಕೆ ಮಾಡಿಕೊಂಡು ಯಾವುದೇ ಬಾಕಿ ಉಳಿದಿಲ್ಲದೆ ಇರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 19 2(ಬಿ)ರಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಐ 418 ಎಂ.ಆರ್.ಸಿ 92 ದಿನಾಂಕ:2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಅಧ್ಯರ್ಪಣೆಯನ್ನು ಒಪ್ಪಿಕೊಳ್ಳಬೇಕಾಗಿದೆ.

**ಆದೇಶ ಸಂ:ಗಭೂಇ:ಕಗಗು 431:2004-05/10571 ದಿನಾಂಕ: 30ನೇ ಅಕ್ಟೋಬರ್ 2004**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 19 2(ಬಿ) ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಮರಳೆಬೇಕುಪ್ಪೆ ಗ್ರಾಮದ ಸರ್ವೆ ನಂ.695ರಲ್ಲಿ 5-00 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಲಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂ 431 ನ್ನು ದಿನಾಂಕ 26.3.2002 ರಂತೆ ಜಾರಿಗೆ ಬರುವಂತೆ ಅಧ್ಯರ್ಪಣೆಯನ್ನು ಒಪ್ಪಿಕೊಳ್ಳಲಾಗಿದೆ (2) ಜಾಮೀನು ಠೇವಣಿಯನ್ನು ಇಲಾಖೆಗೆ ಬರಬೇಕಾದ ಹಣಕ್ಕೆ ಹೊಂದಾಣಿಕೆಯನ್ನು ಮಾಡಿಕೊಳ್ಳಲು ಆದೇಶಿಸಿದೆ.

ನಿರ್ದೇಶಕರು

ಪಿ.ಆರ್. 1543 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು ದೊಡ್ಡಮುದವಾಡಿ ಗ್ರಾಮದಲ್ಲಿ ಮಲ್ಟಿ ಕಲರ್ ಗ್ರಾನೈಟ್‌ಗಾಗಿ ಮೆ: ಶ್ರೀಶೈಲ ಗ್ರಾನೈಟ್ಸ್ ಅಂಡ್ ಮರ್‌ಬಲ್ಸ್ ಪ್ರೈ ಲಿ., ರವರಿಗೆ ಮಂಜೂರಾದ ಕಲ್ಲು ಗಣಿ ಗುತ್ತಿಗೆ ಸಂ. 487ರ ಗುತ್ತಿಗೆಯನ್ನು ಅಧ್ಯರ್ಪಣೆ ಮಾಡುವ ಬಗ್ಗೆ.

**ಉಲ್ಲೇಖ:**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ:ಗಭೂಇ:ಕಗಗು:487:91-92:28-11-2002.
2. ಗುತ್ತಿಗೆದಾರರು ತಮ್ಮ ಪತ್ರ ದಿನಾಂಕ 28.11.2002 ರಲ್ಲಿ ಅಧ್ಯರ್ಪಣೆಗಾಗಿ ಕೋರಿರುವ ಬಗ್ಗೆ.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ದೊಡ್ಡಮುದವಾಡಿ ಗ್ರಾಮದಲ್ಲಿ ಸರ್ವೆ ನಂ. 169 ರಲ್ಲಿ 4-00 ಎಕರೆಗೆ ಮಲ್ಟಿ ಕಲರ್ ಗ್ರಾನೈಟ್‌ಗಾಗಿ ದಿ: 27-12-2001 ರಿಂದ 10 ವರ್ಷಗಳಿಗಾಗಿ ಮೆ: ಶ್ರೀಶೈಲ ಗ್ರಾನೈಟ್ಸ್ ಅಂಡ್ ಮರ್‌ಬಲ್ಸ್ ಪ್ರೈ ಲಿ., ಗ್ರಾನೈಟ್ಸ್ ರವರಿಗೆ ಕಲ್ಲುಗಣಿ ಗುತ್ತಿಗೆಯನ್ನು ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ದಿನಾಂಕ 28.11.2002ರ ಪತ್ರದಲ್ಲಿ ಸದರಿ ಪ್ರದೇಶದಲ್ಲಿ ಗುತ್ತಿಗೆಯನ್ನು ಅಧ್ಯರ್ಪಣೆ ಮಾಡಿಕೊಳ್ಳಲು ಕೋರಿದ್ದಾರೆ.

ಈ ಬಗ್ಗೆ ಕಡತವನ್ನು ಪರಿಶೀಲಿಸುತ್ತಿರುವ ಹಂತದಲ್ಲಿರುವಾಗ ಸದರಿ ಗುತ್ತಿಗೆದಾರರು 2002-03ನೇ ಸಾಲಿನ ಅಧ್ಯರ್ಪಣೆ ಕೋರಿರುವ ದಿನಾಂಕದವರೆಗಿನ ಬಾಕಿ ರೂ. 39,452 ಗಳು ಇದ್ದು ಈ ಬಾಕಿಗೆ ಗುತ್ತಿಗೆ ಮಂಜೂರಾತಿ ಸಮಯದಲ್ಲಿ ಪಡೆಯಲಾದ ಸ್ಥಿರ ತೆರಿಗೆ ಮುಂಗಡ ರೂ. 30,000-00 ಗಳನ್ನು ಹಾಗೂ ಭದ್ರತಾ ಠೇವಣಿ ರೂ. 20,000-00 ಗಳನ್ನು ಬಾಕಿ ಹೊಂದಾಣಿಕೆ ಮಾಡಿಕೊಂಡು ಗುತ್ತಿಗೆ ಅಧ್ಯರ್ಪಣೆಗಾಗಿ ಮನವಿ ಸಲ್ಲಿಸಿರುತ್ತಾರೆ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಗುತ್ತಿಗೆಯ ಮೇಲಿನ ಬಾಕಿಯನ್ನು ಪಾವತಿಸಿ ಉಳಿದ ಬಾಕಿಗೆ ಭದ್ರತಾ ಠೇವಣಿ ಮೊತ್ತವನ್ನು ಹೊಂದಾಣಿಕೆ ಮಾಡಿಕೊಂಡು ಯಾವುದೇ ಬಾಕಿ ಉಳಿದಿಲ್ಲದೆ ಇರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 19 (3)ರಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಐ 418 ಎಂ.ಆರ್.ಸಿ 92 ದಿನಾಂಕ:2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಅಧ್ಯರ್ಪಣೆಯನ್ನು ಒಪ್ಪಿಕೊಳ್ಳಬೇಕಾಗಿದೆ.

**ಆದೇಶ ಸಂ:ಗಭೂಇ:ಕಗಗು 487:2004-05/10517 ದಿನಾಂಕ: 29ನೇ ಅಕ್ಟೋಬರ್ 2004**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 19 (3) ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ದೊಡ್ಡಮುದವಾಡಿ ಗ್ರಾಮದ ಸರ್ವೆ ನಂ.169ರಲ್ಲಿ 4-00 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಲಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂ 6254ನ್ನು ದಿನಾಂಕ 28.11.2002 ರಂತೆ ಜಾರಿಗೆ ಬರುವಂತೆ ಅಧ್ಯರ್ಪಣೆಯನ್ನು ಒಪ್ಪಿಕೊಳ್ಳಲಾಗಿದೆ (2) ಜಾಮೀನು ಠೇವಣಿಯನ್ನು ಇಲಾಖೆಗೆ ಬರಬೇಕಾದ ಹಣಕ್ಕೆ ಹೊಂದಾಣಿಕೆಯನ್ನು ಮಾಡಿಕೊಳ್ಳಲು ಆದೇಶಿಸಿದೆ.

ನಿರ್ದೇಶಕರು

ಪಿ.ಆರ್. 1544 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು